# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ


ಸಂಶೋಧಕರು

**ಮಲ್ಲಿಕಾರ್ಜುನ ಜಿ. ಯರನಾಳ**

ಉಪನ್ಯಾಸಕರು,

ವಾಣಿಜ್ಯಶಾಸ್ತ್ರ ವಿಭಾಗ,

ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಎಸ್. ವಾಣಿಜ್ಯ ಮಹಾವಿದ್ಯಾಲಯ,

ಮಹಾಲಿಂಗಪುರ - ೫೮೭ ೩೧೨

ತಾ : ಮುಧೋಳ ಜಿ : ಬಾಗಲಕೋಟ

ಮಾರ್ಗದರ್ಶಕರು

**ಡಾ. ಅಶೋಕ ಎಸ್. ಆನಿಕಿವಿ**

ಆಯ್ಕೆ ಶ್ರೇಣಿ ಉಪನ್ಯಾಸಕರು,

ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಕಾಲೇಜು,

ಬೆಳಗಾವಿ




ಅಭಿವೃದ್ಧಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಿ. ಆರ್, ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ,

ಜಿ : ಬೆಳಗಾವಿ

ಮಾನ್ಯತೆ :

ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ


ಸಂಶೋಧಕರು

**ಮಲ್ಲಿಕಾರ್ಜುನ ಜಿ. ಯರನಾಳ**

ಉಪನ್ಯಾಸಕರು,
ವಾಣಿಜ್ಯಶಾಸ್ತ್ರ ವಿಭಾಗ,
ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಎಸ್. ವಾಣಿಜ್ಯ ಮಹಾವಿದ್ಯಾಲಯ,
ಮಹಾಲಿಂಗಪುರ - ೫೮೭ ೩೧೨
ತಾ : ಮುಧೋಳ ಜಿ : ಬಾಗಲಕೋಟ





ಮಾರ್ಗದರ್ಶಕರು

**ಡಾ. ಅಶೋಕ ಎಸ್. ಆನಿಕಿವಿ**

ಆಯ್ಕೆ ಶ್ರೇಣಿ ಉಪನ್ಯಾಸಕರು,
ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಕಾಲೇಜು,
ಬೆಳಗಾವಿ







**ಅಭಿವೃದ್ಧಿ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ,**
ಜಿ : ಬೆಳಗಾವಿ

**ಮಾನ್ಯತೆ :**
ಕನ್ನಡ ವಿಶ್ವವಿದ್ಯಾಲಯ, ಹಂಪಿ

**೨೦೦೮**

# ಘೋಷಣಾಪತ್ರ

'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ: ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ' ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಡಾ. ಅಶೋಕ ಎಸ್. ಆನಿಕಿವಿ, ಆಯ್ಕೆ ಶ್ರೇಣಿ ಉಪನ್ಯಾಸಕರು, ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಕಾಲೇಜು, ಬೆಳಗಾವಿ, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಪ್ರಬಂಧವನ್ನು ನಾನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಬಳಸಿಕೊಂಡಿಲ್ಲವೆಂದು, ಇದು ನೂತನ ಪ್ರಬಂಧವಾಗಿದೆಯೆಂದು, ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಮಲ್ಲಿಕಾರ್ಜುನ ಜಿ. ಯರನಾಳ**
ಎಂ.ಕಾಂ. ಟೀಚರ್‌ಫೆಲೋ
ಅಭಿವೃದ್ಧಿ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬.

ಸ್ಥಳ : ಹಾರೂಗೇರಿ

ದಿನಾಂಕ : ೨-೧೦-೦೮

# ದೃಢೀಕರಣ ಪತ್ರ

'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ' ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಶ್ರೀ ಮಲ್ಲಿಕಾರ್ಜುನ ಜಿ. ಯರನಾಳ, ಉಪನ್ಯಾಸಕರು, ಕೆ.ಎಲ್.ಇ. ಸಂಸ್ಥೆಯ ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಎಸ್. ವಾಣಿಜ್ಯ ಮಹಾವಿದ್ಯಾಲಯ, ಮಹಾಲಿಂಗಪುರ, ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧವನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಬಳಸಿಕೊಂಡಿಲ್ಲವೆಂದು ಮತ್ತು ಇದು ನೂತನ ಪ್ರಬಂಧವಾಗಿದೆಯೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೫-೧೦-೦೮

**ಡಾ. ಅಶೋಕ ಎಸ್. ಆನಿಕಿವಿ**
ಆಯ್ಕೆ ಶ್ರೇಣಿ ಉಪನ್ಯಾಸಕರು,
ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ
ಕಾಲೇಜು, ಬೆಳಗಾವಿ

# ಅಧ್ಯಯನದ ವಿನ್ಯಾಸ

# ಕೃತಜ್ಞತೆಗಳು

"ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ" ಎಂಬ ಸಂಶೋಧನಾ ಕಾರ್ಯವನ್ನು ಕೈಕೊಂಡ ಸಂದರ್ಭದಲ್ಲಿ ಅನೇಕ ಮಹನೀಯರು ಪ್ರೇರಣೆ ಮತ್ತು ಸಹಕಾರವನ್ನು ನೀಡಿದ್ದಾರೆ. ಆದ್ದರಿಂದ ಮೊದಲನೆಯದಾಗಿ ಈ ಸಂಶೋಧನಾ ಅಧ್ಯಯನ ಯಶಸ್ವಿಯಾಗಲು ಸಮರ್ಥ ಮಾರ್ಗದರ್ಶನವನ್ನು ನೀಡಿದ ಡಾ. ಅಶೋಕ ಎಸ್. ಆನಿಕಿವಿ, ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಕಾಲೇಜು, ಬೆಳಗಾವಿ, ಇವರನ್ನು ನಾನು ನೆನೆಯದೆ ಇರಲಾರೆ. ಈ ಗುರುಗಳ ಮಾರ್ಗದರ್ಶನ ಪಡೆಯುವ ಅವಕಾಶ ದೊರೆತಿದ್ದು ನನ್ನ ಸುದೈವವೆಂದೇ ಹೇಳುವೆ. ಏಕೆಂದರೆ ಅವರು ತೋರಿದ ಸಹಕಾರ, ಪ್ರೋತ್ಸಾಹ, ಅಮೂಲ್ಯವಾದ ಪ್ರೀತಿ ಮತ್ತು ಮಾರ್ಗದರ್ಶನ ಇವು ನನ್ನಿಂದ ಈ ಕೃತಿರೂಪಗೊಳ್ಳಲು ಕಾರಣವಾದವು. ಈ ಪ್ರಬಂಧದ ಶೀರ್ಷಿಕೆಯನ್ನು ಸಹ ಅವರೇ ಹಾಕಿಕೊಟ್ಟಿದ್ದರಿಂದ ಅವರಿಗೆ ನನ್ನ ಅನಂತ ಪ್ರಣಾಮಗಳು.

ನನ್ನನ್ನು ಎಂ.ಫಿಲ್. ಮಾಡಲು ಪ್ರೋತ್ಸಾಹಿಸಿ ಸಹಕಾರ ನೀಡಿದ ನನ್ನ ಮಹಾವಿದ್ಯಾಲಯದ ಪ್ರಾಚಾರ್ಯರಾದ ಡಾ. ಬಿ. ಎಂ. ಪಾಟೀಲ, ಆಡಳಿತ ಮಂಡಳಿಯ ಚೇರಮನ್ನರು ಹಾಗೂ ಸದಸ್ಯರಿಗೆ ನನ್ನ ಅನಂತ ಕೃತಜ್ಞತೆಗಳು.

ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಲಹೆ ಮತ್ತು ಸಹಕಾರವನ್ನು ನೀಡಿದ ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿಯ ಸಂಯೋಜಕರಾದ ಡಾ. ವಿಠ್ಠಲ ಮಾಳಿ, ಅಭಿವೃದ್ಧಿ ಅಧ್ಯಯನದ ಮುಖ್ಯಸ್ಥರಾದ ಡಾ. ಚಂದ್ರಶೇಖರ ಗುಡಸೆ ಹಾಗೂ ಉಳಿದ ನನ್ನ ಪೂಜ್ಯ ಗುರುವೃಂದಕ್ಕೆ ಪ್ರಾಂಜಲ ಪ್ರಣಾಮಗಳು.

ನನ್ನ ಬಾಳಿಗೆ ಬೆನ್ನೆಲುಬಾಗಿ ಕಷ್ಟ-ಸುಖಗಳಲ್ಲಿ ಭಾಗಿಯಾದ ನನ್ನ ಪೂಜ್ಯ ತಂದೆ ದಿ. ಗಿರಮಲ್ಲಪ್ಪ , ತಾಯಿ ಬೌರವ್ವ, ನನ್ನ ಸಹೋದರರಾದ ರಾಮಗೊಂಡಪ್ಪ ಮತ್ತು ಅಪ್ಪಾಸಾಹೇಬ ಇವರನ್ನು ಎಷ್ಟು ನೆನೆದರೂ ಕಡಿಮೆಯೇ.

ಗ್ರಂಥ ಸಹಾಯ ನೀಡಿದ ಗ್ರಂಥಾಲಯದ ಮುಖ್ಯಸ್ಥರಾದ ಎಸ್. ಎಸ್. ಬಿದರೆ ಹಾಗೂ ಸಿಬ್ಬಂದಿಗೆ ನನ್ನ ಅನಂತ ಧನ್ಯವಾದಗಳು.

ಸದಾ ನನ್ನ ಬಾಳಿನ ಏಳಿಗೆಯನ್ನು ಬಯಸಿದ ನನ್ನ ಪತ್ನಿ ಶ್ರೀಮತಿ ಭಾರತಿ ಮತ್ತು ಮಕ್ಕಳಾದ ಐಶ್ವರ್ಯ ಮತ್ತು ಮಹಾಲಿಂಗ, ಅತ್ತೆ-ಮಾವಂದಿರಾದ ಮಲ್ಲಿಕಾರ್ಜುನ ಮತ್ತು ಕಸ್ತೂರಿಬಾಯಿ ಇವರಿಗೆ ನನ್ನ ಅಭಿನಂದನೆಗಳು ಮತ್ತು ನಮಸ್ಕಾರಗಳು.

ನನ್ನ ಕ್ಷೇತ್ರ ಕಾರ್ಯದಲ್ಲಿ ಹಾಗೂ ಸಂಶೋಧನೆ ಗ್ರಂಥವನ್ನು ರಚಿಸುವಲ್ಲಿ ಸಹಕಾರ ನೀಡಿದ ನನ್ನ ಸಿಬ್ಬಂದಿ ಮಿತ್ರರಾದ ಪ್ರೊ. ಮಹಾಂತೇಶ ಎಮ್. ಹುರಳಿ, ಡಾ. ಆರ್. ಎಂ. ಪಾಟೀಲ, ಡಾ. ಅಶೋಕ ನರೋಡೆ, ಪ್ರೊ. ಎ. ಎಸ್. ಧಾಮಣ್ಣವರ, ಪ್ರೊ. ಕೆ. ಎಂ. ಅವರಾದಿ, ಪ್ರೊ. ಜಿ. ಎ. ಮಠಪತಿ, ಪ್ರೊ. ಎಸ್. ಎಂ. ಬನ್ನೂರ, ಪ್ರೊ. ಎಂ. ಎಂ. ನಿಂಬರಗಿ, ಪ್ರೊ. ಶ್ರೀಮತಿ ಎಸ್. ಡಿ. ಸೋರಗಾಂವಿ ಹಾಗೂ ಮಿತ್ರರಾದ ಬೆಳಗಲಿ ಗ್ರಾಮ ಪಂಚಾಯಿತಿಯ ಕಾರ್ಯದರ್ಶಿ ಮತ್ತು ಪಂಚಾಯಿತಿ ಸದಸ್ಯರಾದ ಹಣಮಂತ ಶಿರೋಳ, ಇವರಿಗೆ ಅಭಿನಂದನೆಗಳು.

ಕೊನೆಯದಾಗಿ ಕಂಪ್ಯೂಟರ್ ಅಕ್ಷರ ಜೋಡಣೆಯನ್ನು ಸಮಯಕ್ಕೆ ಸರಿಯಾಗಿ ಹಾಗೂ ಸುಂದರವಾಗಿ ಮುದ್ರಿಸಿಕೊಟ್ಟ ಶಿವಪ್ರಸಾದ ಡಿ.ಟಿ.ಪಿ. ಸೆಂಟರಿನ ಮಾಲಿಕರಾದ ರಾಜು ಮುಗಳಖೋಡ ಇವರಿಗೆ ನನ್ನ ಅಭಿನಂದನೆಗಳು.

ಸ್ಥಳ : ಹಾರೂಗೇರಿ **ಮಲ್ಲಿಕಾರ್ಜುನ ಯರನಾಳ**

ದಿನಾಂಕ :

# ಅಧ್ಯಾಯ ಒಂದು
# ಅಧ್ಯಯನದ ಸಮರ್ಥನೆ, ಉದ್ದೇಶ ಮತ್ತು ಸ್ವರೂಪ

೧.೧ ಪ್ರವೇಶ, ವಿಷಯ ಆಯ್ಕೆ ಮತ್ತು ಸಮರ್ಥನೆ

೧.೨ ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಸ್ಥಿತಿ-ಗತಿ

೧.೩ ವಿಷಯ ವಸ್ತುವಿನ ವಿವರಣೆ

೧.೪ ಬೆಳಗಲಿಯ ಭೌಗೋಳಿಕತೆ

೧.೫ ಅಧ್ಯಯನದ ಉದ್ದೇಶಗಳು

೧.೬ ಸಂಶೋಧನಾ ವಿಧಾನ

೧.೭ ಅಧ್ಯಯನದಲ್ಲಿ ಒಳಗೊಂಡಿರುವ ಅಧ್ಯಾಯಗಳು

೧.೮ ಅಧ್ಯಯನದ ಪ್ರಸ್ತುತತೆ

೧.೯ ಅಧ್ಯಯನದ ಇತಿ-ಮಿತಿಗಳು

# ಅಧ್ಯಾಯ ಒಂದು
# ಅಧ್ಯಯನದ ಸಮರ್ಥನೆ, ಉದ್ದೇಶ ಮತ್ತು ಸ್ವರೂಪ

### ೧.೧ ವಿಷಯ ಆಯ್ಕೆ ಮತ್ತು ಸಮರ್ಥನೆ :

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾನೂನು ಒಂದು ಅಗ್ರಮಾನ್ಯ ಕಾಯ್ದೆಯೆಂದು ವ್ಯಾಪಕವಾಗಿ ಪರಿಗಣಿತವಾಗಿದೆ. ಇದನ್ನು ಪ್ರಮುಖವಾಗಿ ಒಂದು ಉದ್ಯೋಗ ದೊರಕಿಸುವ ಕಾರ್ಯಕ್ರಮವೆಂದು ಪರಿಗಣಿಸಲಾಗುತ್ತದೆ. ನಿಜಕ್ಕೂ ಇದು ಬಡವನಿಗೆ ಜೀವನಾಧಾರ ಕೂಲಿ ಒದಗಿಸಬಲ್ಲ ಕಾರ್ಯಕ್ರಮವನ್ನು ನೀಡಬಲ್ಲದು. ಇದಕ್ಕಾಗಿ ಆತ ಯೋಚಿಸಬೇಕಾಗಿಲ್ಲ. ಒಬ್ಬ ಫಲಾನುಭವಿ ಒಂದು ವರ್ಷದಲ್ಲಿ ನೂರು ದಿನಗಳ ಉದ್ಯೋಗದ ಖಾತರಿಯನ್ನು ಹಕ್ಕಾಗಿ ಹೊಂದಬಲ್ಲ ಅಪೂರ್ವ ಅವಕಾಶವನ್ನು ನೀಡುವುದೇ ಈ ಕಾನೂನಿನ ಪ್ರಮುಖ ಅಂಶವಾಗಿದೆ. ಇದು ನಿಜಕ್ಕೂ ಹಿಂದೆಂದೂ ಕಂಡುಬರದ ನೂತನ ಪ್ರಯತ್ನವಾಗಿದೆ. ಇದರಿಂದ ಬಡವರಿಗೆ ಇನ್ನೂ ಅನೇಕ ಅನುಕೂಲತೆಗಳಿರುವದನ್ನು ಕಾಣಬಹುದಾಗಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ ಇನ್ನೂ ಹೆಚ್ಚಿನ ಅನುಕೂಲತೆಗಳನ್ನು ಒಳಗೊಂಡಿದೆ. ಭಾರತದ ಸಾಮಾಜಿಕ ಅಭಿವೃದ್ಧಿಯ ನಿಟ್ಟಿನಲ್ಲಿ ಅನೇಕ ಬದಲಾವಣೆಗಳನ್ನುಂಟು ಮಾಡಬಲ್ಲ ಸಾಮರ್ಥ್ಯ ಇದಕ್ಕಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹೊಂದಿರುವ ಪ್ರಯೋಜನಗಳ ಬಗೆಗೆ ಕಳೆದ ಎರಡು ವರ್ಷಗಳಲ್ಲಿ ಸಾಕಷ್ಟು ಮನವರಿಕೆಯಾಗಿದೆ.

ಸಮುದಾಯ ಮತ್ತು ಆಡಳಿತ ಯಂತ್ರದ ಸಹಭಾಗಿತ್ವ ಇದ್ದರೆ ಯಾವುದೇ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಸಾಧ್ಯವೆನ್ನುವುದು ಈಗ ದೃಢಪಟ್ಟಿದೆ. ಅನೇಕ ರಾಜ್ಯಗಳಲ್ಲಿ ಅಧಿಕಾರಿಗಳು, ಸರಕಾರೇತರ ಸಂಸ್ಥೆಗಳು, ಗ್ರಾಮದ ಸಮುದಾಯ ಮತ್ತು ಕೆಲಸಗಾರರು ಒಟ್ಟಾಗಿ ಕಾರ್ಯನಿರ್ವಹಿಸಿದ್ದು ಅಂಥ ಕಾರ್ಯಕ್ರಮ ಹೆಚ್ಚು ಪರಿಣಾಮಕಾರಿಯಾಗಿರುವುದು ಮತ್ತು ಫಲಕಾರಿಯಾಗಿರುವುದು ಕಂಡುಬಂದಿದೆ. ಇದು ಬ್ರಿಟಿಷ್ ಕಾಲದ ಆಡಳಿತ ವೈಖರಿಗಿಂತ ಅಜಗಜಾಂತರ ವ್ಯತ್ಯಾಸ ಹೊಂದಿದೆ. ಅಧಿಕಾರ ವಿಕೇಂದ್ರಿಕರಣದ ನಿಜವಾದ ಅರ್ಥವನ್ನು ಅಳವಡಿಸಿಕೊಂಡಿದೆ. ಅನೇಕ ಜಿಲ್ಲೆಗಳಲ್ಲಿ ವಿವಿಧ ಬಗೆಯ ಕಾರ್ಯಕ್ರಮಗಳನ್ನು ಈ ರೀತಿ ಜಂಟೀ ಸಹಯೋಗದಲ್ಲಿ ಕೈಗೊಳ್ಳುವ ಬಗ್ಗೆ ನಡೆಸಿರುವ ಪ್ರಯತ್ನ, ಉತ್ತೇಜಕವಾಗಿ ಕಂಡುಬಂದಿರುವುದು ಒಂದು ಒಳ್ಳೆಯ ಬೆಳವಣಿಗೆಯೆನ್ನಬಹುದು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಒಂದು ಉತ್ತಮ ಅವಕಾಶ ಕಲ್ಪಿಸಿದೆಯೆಂದು ಅನೇಕ ಸ್ವಯಂ ಸೇವಾ ಸಂಘಟನೆಗಳು, ಸರಕಾರೇತರ ಸಂಸ್ಥೆಗಳು, ಮತ್ತು ಗ್ರಾಮೀಣ ಬಡವರು ಇದೀಗ ಮನಗಂಡಿದ್ದಾರೆ. ಹಾಗಾಗಿ ಅಭಿವೃದ್ಧಿ ಯೋಜನೆಗಳಲ್ಲಿ ಒಟ್ಟಾಗಿ ಸೇರಲು ಮತ್ತು ಅದನ್ನು ಅನುಷ್ಠಾನಗೊಳಿಸಲು ಮುಂದೆ ಬರುತ್ತಿದ್ದಾರೆ.

ಕೃಷಿ ಕ್ಷೇತ್ರದಲ್ಲಿ ಬಂಡವಾಳದ ನಿರ್ಮಾಣ ಈ ಕಾರ್ಯಕ್ರಮದ ಮಹತ್ವದ ಕೊಡುಗೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಯಾವ ರೀತಿಯ ಕೆಲಸಗಳನ್ನು ಕೈಕೊಳ್ಳಬಹುದು ಎನ್ನುವುದನ್ನು ಕಾನೂನೇ ತಿಳಿಸುತ್ತದೆ. ಎಲ್ಲ ಕಾರ್ಯಕ್ರಮಗಳು ಒಂದಿಲ್ಲೊಂದು ರೀತಿಯಲ್ಲಿ ಸ್ವತ್ತು ನಿರ್ಮಾಣ ಮತ್ತು ನೀರಿನ ಮಿತವ್ಯಯಕ್ಕೆ ಸಂಬಂಧಿಸಿದ್ದಾಗಿವೆ. ಹಳ್ಳಿಯ ಕಾಮಗಾರಿಯೆಂದರೆ ಪ್ರತಿವರ್ಷ ಮಳೆ ಬಂದಾಗ ಕೊಚ್ಚಿಕೊಂಡು ಹೋಗುವ ಕಳಪೆ ರಸ್ತೆಯ ಕೆಲಸ ಎನ್ನುವ ಭಾವನೆಯೊಂದಿತ್ತು. ಇದಕ್ಕೆ ಪ್ರತಿಯಾಗಿ ಮೊದಲು ವರ್ಷ ೯ ಸಾವಿರ ಕೋಟಿ ರೂ. ವೆಚ್ಚಗಳಲ್ಲಿ ಕೈಕೊಳ್ಳಲಾದ ೮,೩೦,೦೦೦ ಕಾಮಗಾರಿಗಳ ಪ್ರತಿಶತ ೭೫ ರ ಭಾಗ ಮಳೆ ಕೊಯ್ಲಿನ ವ್ಯವಸ್ಥೆ ನಿರ್ಮಾಣ, ಸಣ್ಣ ನೀರಾವರಿ, ಕೆರೆಗಳ ಅಭಿವೃದ್ಧಿ, ಸಮುದಾಯ ಬಳಕೆಗಾಗಿ ಬಾವಿ ನಿರ್ಮಾಣ, ಭೂ ಅಭಿವೃದ್ಧಿ, ಪ್ರವಾಹ ನಿಯಂತ್ರಣ ಮತ್ತು ಅರಣ್ಯ ಅಭಿವೃದ್ಧಿ ಮುಂತಾದ ಕಾರ್ಯಕ್ರಮಗಳಿಗಾಗಿ ವಿನಿಯೋಗವಾಗಿದೆ. ಇದರಿಂದಾಗಿ ಸುಮಾರು ೧೨ ಕೋಟಿ ಘನಮೀಟರ ನೀರು ಸಂಗ್ರಹ ಸಾಮರ್ಥ್ಯ, ೩ ಲಕ್ಷ ಕಿ.ಮೀ. ಒಳಚರಂಡಿ, ನೀರು ಸಂಗ್ರಹಿತ ಪ್ರದೇಶಗಳಲ್ಲಿ ಹರಿಗಾಲುವೆಗಳ ನಿರ್ಮಾಣ, ಸುಮಾರು ೩.೫ ಹೆಕ್ಟೇರ್ ಪ್ರದೇಶದಲ್ಲಿ ತೋಟಗಾರಿಕೆ ಬೆಳೆಯ ಅಭಿವೃದ್ಧಿ ಮುಂತಾದ ಪ್ರಯೋಜನಗಳು ಲಭಿಸಿವೆ. ಅಭಾವಪೀಡಿತ ಮತ್ತು ಅಲ್ಪ ಮಳೆಯ ಹಾಗೂ ಅರೆಮರಳುಗಾಡು ಪ್ರದೇಶಗಳಲ್ಲಿ ಬರಗಾಲ ಹಾಗೂ ಕ್ಷಾಮ ತಡೆಗಟ್ಟಲು ಇವು ನೆರವಾಗಬಲ್ಲವು.

ಮೊದಲ ವರ್ಷದಲ್ಲಿ ಮಹತ್ಸಾಧನೆಯನ್ನು ನಾವು ನಿರೀಕ್ಷಿಸುವುದು ಅಷ್ಟು ಸೂಕ್ತವೆನಿಸುವದಿಲ್ಲ. ಆದರೆ ಅದೇ ಉತ್ಸಾಹ ಎರಡನೇ ವರ್ಷವೂ ಮುಂದುವರೆದಿದೆ ಎನ್ನುವುದು ಗಮನಾರ್ಹ ಅಂಶವಾಗಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗಳು ಗ್ರಾಮೀಣ ಪ್ರದೇಶದಲ್ಲಿ ಸೂಕ್ತ ಬಂಡವಾಳ ಹೂಡಿಕೆಯ ಮತ್ತು ಅಭಿವೃದ್ಧಿಪರ ಕಾರ್ಯಕ್ರಮಗಳಾಗಿವೆ ಎನ್ನುವುದಕ್ಕೆ ಯಾವುದೇ ಸಂಶಯ ಉಳಿದಿಲ್ಲ. ಆದಕಾರಣ, ಇಂತಹ ಅಭಿವೃದ್ಧಿಪರ ಯೋಜನೆ ಬಗ್ಗೆ ಉತ್ತರ ಕರ್ನಾಟಕದ ಹಿಂದುಳಿದ ಬಾಗಲಕೋಟ ಜಿಲ್ಲೆಯ ಮುಧೋಳ ವಲಯದಲ್ಲಿ, ಅದರಲ್ಲಿಯೂ ವಿಶೇಷವಾಗಿ ಬೆಳಗಲಿ ಗ್ರಾಮ ಪಂಚಾಯತ ವ್ಯಾಪ್ತಿಯಲ್ಲಿ ಈ ಕುರಿತಾದ ಕಾರ್ಯಕ್ರಮಗಳ ಮೇಲೆ ಯಾವುದೇ ವಿಶೇಷ ಸಂಶೋಧನಾ ಅಧ್ಯಯನಗಳು ಇದುವರೆಗೆ ಕೈಗೊಂಡಿಲ್ಲ. ಎಪ್ರಿಲ್ ೨೦೦೮ ರಲ್ಲಿ ಬಾಗಲಕೋಟ ಜಿಲ್ಲೆಯಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ, ಆದರಂತೆ ಬೆಳಗಲಿ ಗ್ರಾಮದಲ್ಲಿಯೂ ಅದೇ ಅವಧಿಯಲ್ಲಿ ಯೋಜನೆಯನ್ನು ಕಾರ್ಯಾನುಷ್ಠಾನಗೊಳಿಸಲಾಯಿತು. ಈ ಹಿನ್ನೆಲೆಯಲ್ಲಿ ವಿಷಯವನ್ನು ಆಯ್ಕೆ ಮಾಡಿಕೊಂಡು ಅದರ ಸಾದಕ-ಬಾಧಕಗಳನ್ನು ತಿಳಿಯುವ ಉದ್ದೇಶದಿಂದ ಈ ಸಂಶೋಧನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

**೧.೨ ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಸ್ಥಿತಿಗತಿ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ದೇಶದ ವಿವಿಧ ರಾಜ್ಯಗಳು ಅನುಷ್ಠಾನಗೊಳಿಸುತ್ತಿದ್ದು, ಪ್ರಾದೇಶಿಕ ಭಿನ್ನತೆ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಅಧಿನಿಯಮಕ್ಕೆ

ಪೂರಕವಾಗಿ ನಿಯಮಗಳನ್ನು ರೂಪಿಸಿಕೊಂಡಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ' ಎಂಬ ಹೆಸರಿನಲ್ಲಿ ದಿನಾಂಕ : ೦೮-೦೨-೨೦೦೭ ರ ಕರ್ನಾಟಕ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಿದೆ. ಅಂದಿನಿಂದ 'ರಾಷ್ಟ್ರೀಯ ಗ್ರಾಮೀಣ ಖಾತರಿ ಯೋಜನೆ - ಕರ್ನಾಟಕ' ಜಾರಿಗೊಂಡಿದೆ.

ಮೊದಲ ಹಂತದಲ್ಲಿ, ರಾಜ್ಯದ ೫ ಜಿಲ್ಲೆಗಳ ೩೨ ತಾಲ್ಲೂಕುಗಳನ್ನು ಡಾ॥ ನಂಜುಡಪ್ಪ ವರದಿಯ ಸೂಚ್ಯಂಕದ ಆಧಾರದಂತೆ ಆಯ್ಕೆ ಮಾಡಲಾಗಿದೆ. ರಾಜ್ಯದ ಬೀದರ್, ಗುಲ್ಬರ್ಗಾ, ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ೨೦೦೬-೦೭ ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗಿದೆ. ಮುಂದುವರೆದು ೨೦೦೭-೦೮ ರ ಆರ್ಥಿಕ ವರ್ಷದಿಂದ ಎರಡನೆ ಹಂತದಲ್ಲಿ ಹಾಸನ, ಕೊಡಗು, ಚಿಕ್ಕಮಗಳೂರು, ಶಿವಮೊಗ್ಗ, ಬೆಳಗಾವಿ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟಾರೆ ರಾಜ್ಯದ ೧೧ ಜಿಲ್ಲೆಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಿ ಈಗ ಮತ್ತೆ ಉಳಿದ ೧೮ ಜಿಲ್ಲೆಗಳಲ್ಲಿ ಈ ಯೋಜನೆ ದಿನಾಂಕ : ೧೧-೦೪-೨೦೦೮ ರಿಂದ ಜಾರಿಗೆ ಬಂದಿದೆ.

**೧.೩ ವಿಷಯ ವಸ್ತುವಿನ ವಿವರಣೆ :**

ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಅಭಿವೃದ್ಧಿಯಾಗದ ಹೊರತು ದೇಶದ ಅಭಿವೃದ್ಧಿ ಸಾಧ್ಯವಿಲ್ಲ ಎಂದು ಮಹಾತ್ಮ ಗಾಂಧೀಜಿಯವರು ಗ್ರಾಮೀಣಾಭಿವೃದ್ಧಿಯ ಬಗ್ಗೆ ಒಲವನ್ನು, ಚಿಂತನೆಯನ್ನು ಮಾಡಿದ್ದರು. ಪೂರಕವೆಂಬಂತೆ ವಿವಿಧ ಕಾಲಘಟ್ಟಗಳಲ್ಲಿ ಕಾರ್ಯನಿರ್ವಹಿಸಿದ ಸರ್ಕಾರಗಳು ಪಂಚವಾರ್ಷಿಕ ಯೋಜನೆಗಳುದ್ದಕ್ಕೂ ಗ್ರಾಮೀಣಾಭಿವೃದ್ಧಿಯ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಿಕೊಂಡು ಬರುತ್ತಿವೆ. 'ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ' ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷಿ ಯೋಜನೆಯಾಗಿದ್ದು ರಾಜ್ಯದಲ್ಲಿ ಫೆಬ್ರುವರಿ ೨೦೦೬ ರಿಂದ ಐದು ಜಿಲ್ಲೆಗಳಲ್ಲಿ ಆರಂಭಗೊಂಡು ಪ್ರಸ್ತುತ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಾರಿಗೆ ಬಂದಿರುವುದು ಪ್ರಗತಿಪರ ವಿಚಾರವಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ವಯಸ್ಕ ಉದ್ಯೋಗಾಕಾಂಕ್ಷಿಗಳಿಗೆ ವರ್ಷದಲ್ಲಿ ಕನಿಷ್ಟ ನೂರು ದಿನಗಳ ಉದ್ಯೋಗಾವಕಾಶವನ್ನು ಕಲ್ಪಿಸಿ ಅವರ ಆರ್ಥಿಕ ಮಟ್ಟವನ್ನು ಸುಧಾರಿಸುವುದೇ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಗುರಿಯಾಗಿದೆ.

ಸ್ವಇಚ್ಛೆಯಿಂದ ಅರ್ಜಿ ಸಲ್ಲಿಸುವ ಅಕುಶಲ, ದೈಹಿಕ ಕೆಲಸ ಬಯಸುವ, ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರಿಗೆ ಪ್ರತಿ ಕುಟುಂಬದ ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವುದು ಮತ್ತು ಗ್ರಾಮೀಣ ಜನರಿಗೆ ದೀರ್ಘಕಾಲದ ಜೀವನೋಪಾಯದ ಮಾರ್ಗಗಳನ್ನು ಬಲಪಡಿಸುವ ಧ್ಯೇಯ ಹೊಂದಿರುವ ಸರಕಾರಿ ಯೋಜನೆಯೇ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಾಗಿದೆ.[೧]

ಸಂವಿಧಾನದ ೭೩ ನೇ ತಿದ್ದುಪಡಿಯ ಪ್ರಕಾರ 'ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩'ರ ಅನ್ವಯ ಮೂರು ಹಂತದ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸ್ಥಾಪಿಸಿ, ವಿಕೇಂದ್ರೀಕರಣದ ತತ್ವದ ಹಿನ್ನೆಲೆಯಲ್ಲಿ ಅಧಿಕಾರ, ಅನುದಾನ ಹಾಗೂ ಅಧಿಕಾರಿಗಳನ್ನು ಎರಡು ದಶಕಗಳಿಗೂ ಹಿಂದೆಯೇ ಸಂಸ್ಥೆಗಳಿಗೆ ಒದಗಿಸಿದ ಮೊದಲ ರಾಜ್ಯ ಕರ್ನಾಟಕ ಎಂಬುದು ಗಮನಾರ್ಹ ಸಂಗತಿ. ಇದುವರೆಗೆ ಆಡಳಿತ ನೀಡಿರುವ ಎಲ್ಲಾ ಸರ್ಕಾರಗಳು ಕೆಳಹಂತದ ಸ್ಥಳೀಯ ಸರ್ಕಾರಗಳಿಗೆ ರಾಜಕೀಯ, ಆಡಳಿತ ಹಾಗೂ ಆರ್ಥಿಕ ವಿಕೇಂದ್ರಿಕರಣದ ಮೂಲಕ ಹೆಚ್ಚಿನ ಸ್ವಾಯತ್ತತೆ ಮತ್ತು ಅಧಿಕಾರವನ್ನು ನೀಡುವುದು ಹಾಗೂ ನೀಡುತ್ತಾ ಬರುತ್ತಿರುವುದು ಪ್ರಜಾಪ್ರಭುತ್ವಕ್ಕೆ ನೀಡಿರುವ ನಿಜವಾದ ಮನ್ನಣೆ ಎನ್ನಬಹುದು. ಈ ಹಿನ್ನಲೆಯಲ್ಲಿ ನಮ್ಮ ರಾಜ್ಯದ ಪಂಚಾಯತ್ ರಾಜ್ ವ್ಯವಸ್ಥೆಯು ದೇಶದಲ್ಲಿ ತನ್ನ ಅಸ್ಥಿತ್ವವನ್ನು ಪರಿಚಯಿಸಿಕೊಂಡಿದೆ ಮತ್ತು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನು ಸಮರ್ಥವಾಗಿ ಅನುಷ್ಠಾನಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

ಅದರಂತೆ ಬಾಗಲಕೋಟ ಜಿಲ್ಲೆಯ ಮುಧೋಳ ತಾಲೂಕಿನ ಬೆಳಗಲಿ ಗ್ರಾಮ ಪಂಚಾಯತಿಯಲ್ಲಿ ಎಪ್ರಿಲ್ ೨೦೦೮ ರಿಂದ ಅನುಷ್ಠಾನಗೊಳಿಸಿದ ಈ ಯೋಜನೆಯ ಪ್ರಯೋಜನೆಯು ಎಷ್ಟರ ಮಟ್ಟಿಗೆ ಸೂಕ್ತವಾಗಿದೆ ಮತ್ತು ಫಲಾನುಭವಿಗಳಿಗೆ ಜೀವನಾಧಾರ ಒದಗಿಸಲು ಸಹಾಯಕವಾಗಿದೆಯೇ ಎಂಬುದರ ಬಗ್ಗೆ ಅಭ್ಯಸಿಸುವುದು ಈ ಅಧ್ಯಯನದ ಉದ್ದೇಶ.

**೧.೪ ಬೆಳಗಲಿಯ ಭೌಗೋಳಿಕತೆ :**

ರನ್ನಬೆಳಗಲಿ ಗ್ರಾಮ ಪಂಚಾಯತ ಜಿಲ್ಲಾ ಕೇಂದ್ರದಿಂದ ೭೫ ಕಿಲೋ ಮೀಟರ್, ತಾಲೂಕಾ ಕೇಂದ್ರದಿಂದ ೧೮ ಕಿಲೋ ಮೀಟರ್ ದೂರದಲ್ಲಿದ್ದು, ಉತ್ತರಕ್ಕೆ ಜಮಖಂಡಿ ತಾಲೂಕಿನ ನಾವಲಗಿ, ಜಗದಾಳ ಗ್ರಾಮ ಪಂಚಾಯತ, ದಕ್ಷಿಣಕ್ಕೆ ನಾಗರಾಳ ಗ್ರಾಮ ಪಂಚಾಯತ, ಪೂರ್ವಕ್ಕೆ ಮುಗಳಖೋಡ ಗ್ರಾಮ ಪಂಚಾಯತ ಮತ್ತು ಪಶ್ಚಿಮಕ್ಕೆ ಮಹಾಲಿಂಗಪುರ ಪುರಸಭೆಯ ಸರಹದ್ದು ಹೊಂದಿದ್ದು, ೨೦೦೧ ರ ಜನಗಣತಿಯ ಪ್ರಕಾರ ೧೫೦೪೧ ಜನಸಂಖ್ಯೆಯನ್ನು ಹೊಂದಿದ್ದು ತಾಲೂಕಿನಲ್ಲಿಯೇ ಅತೀದೊಡ್ಡ ಗ್ರಾಮ ಪಂಚಾಯತಿಯೆಂಬ ಹೆಗ್ಗಳಿಕೆಯನ್ನು ಹೊಂದಿದೆ. ಈ ಗ್ರಾಮ ಪಂಚಾಯತಿಯಲ್ಲಿ ೩೮ ಸದಸ್ಯರನ್ನು ಒಳಗೊಂಡಿರುವುದು ವಿಶೇಷತೆಯನ್ನು ಸೂಚಿಸುತ್ತದೆ. ಬೆಳಗಲಿಯು ಅಕ್ಷಾಂಶ ೧೬.೫° ದಲ್ಲಿ ಮತ್ತು ರೇಖಾಂಶ ೭೫° ದಲ್ಲಿ ಬರುತ್ತದೆ.

ಐತಿಹಾಸಿಕೆ ಹಿನ್ನೆಲೆ : ರನ್ನಬೆಳಗಲಿ ಗ್ರಾಮವು ಆದಿಕವಿ, ಕವಿಚಕ್ರವರ್ತಿ ಪಂಪ ಮಹಾಕವಿಯ ಸಮಕಾಲೀನ ರನ್ನ ಜನ್ಮಸ್ಥಳವಾಗಿದ್ದು ಪುರಾಣಪ್ರಸಿದ್ಧವಾಗಿದೆ.

ಭೌಗೋಳಿಕತೆ : ರನ್ನಬೆಳಗಲಿ ಗ್ರಾಮ ಪಂಚಾಯತಿಯು ೫೩.೦೭ ಹೆಕ್ಟೇರ್ ವಸತಿ ಪ್ರದೇಶ ಹೊಂದಿದೆ. ಒಟ್ಟು ಭೌಗೋಳಿಕ ವಿಸ್ತೀರ್ಣ ೧೦೪೫೮.೩೫ ಹೆಕ್ಟೇರ್ ಭೌಗೋಳಿಕ ಪ್ರದೇಶವನ್ನು ಮತ್ತು ೯೮೭೮.೨೧ ಹೆಕ್ಟೇರ್ ಸಾಗುವಳಿ ಪ್ರದೇಶವನ್ನು, ೫೦೭.೦೭ ಅರಣ್ಯ

ಪ್ರದೇಶವನ್ನು ಹಾಗೂ ೨೦ ಹೆಕ್ಟೇರ್ ಸರಕಾರಿ ಜಮೀನನ್ನು ಹೊಂದಿದೆ. ಈ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ ನೀರಾವರಿ ಪ್ರದೇಶವಾಗಿದೆ.

ವಾಣಿಜ್ಯ ಬೆಳೆಗಳು : ಕಬ್ಬು, ಅರಿಷಿಣ, ಹತ್ತಿ, ಸೂರ್ಯಪಾನ, ಸೊಯಾಬಿನ, ಬಾಳೆ ಮುಂತಾದವುಗಳು.

ಆಹಾರಧಾನ್ಯಗಳು : ಗೋವಿನಜೋಳ, ಜೋಳ, ಗೋದಿ, ಜವೆಗೋದಿ, ಕಡಲೆ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ.

ನೀರಿನ ಮೂಲಗಳು : ಘಟಪ್ರಭಾ ಎಡದಂಡೆ ಕಾಲುವೆ, ಹಳ್ಳ, ಕೆರೆ, ಬಾವಿ ಮತ್ತು ಕೊಳವೆಬಾವಿ ಮುಂತಾದವುಗಳು ನೀರಿನ ಮೂಲಗಳಾಗಿವೆ.

ವಾತಾವರಣವು ಋತುಮಾನದ ಅನುಗುಣವಾಗಿ ಬದಲಾವಣೆ ಹೊಂದುತ್ತದೆ. ಸಾಮಾನ್ಯವಾಗಿ ಉಷ್ಣಾಂಶವು ೨೮° ಸೆಲ್ಸಿಯಸ್ ಇರುತ್ತದೆ. ಬೇಸಿಗೆಯಲ್ಲಿ ೩೦° ಸೆಲ್ಸಿಯಸ್‌ದಿಂದ ೪೦° ಸೆಲ್ಸಿಯಸ್‌ವರೆಗೆ ಇರುತ್ತದೆ. ಚಳಿಗಾಲದಲ್ಲಿ ೨೦° - ೨೫° ಸೆಲ್ಸಿಯಸ್‌ವರೆಗೆ ಇರುತ್ತದೆ.

**೧.೫ ಅಧ್ಯಯನದ ಉದ್ದೇಶಗಳು :**

'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಅಧ್ಯಯನವನ್ನು ಸಂಶೋಧನೆಗಾಗಿ ಕೈಗೆತ್ತಿಕೊಳ್ಳಲಾಗಿದೆ. ಬೆಳಗಲಿ ಗ್ರಾಮ ಪಂಚಾಯತಿಯಲ್ಲಿ ಈ ಯೋಜನೆಯ ಪ್ರಗತಿ ಪರಿಶೀಲನೆಯು ಸಂಶೋಧನೆಯ ಉದ್ದೇಶವಾಗಿರುತ್ತದೆ. ಪ್ರಸ್ತುತ ಅಧ್ಯಯನವು ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧) ಭಾರತದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉಗಮ ಹಾಗೂ ವಿಕಾಸದ ಬಗೆಗೆ ತಿಳಿದುಕೊಳ್ಳುವುದು.

೨) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಧಿನಿಯಮವನ್ನು ತಿಳಿದುಕೊಳ್ಳುವುದು.

೩) ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನದ ಬಗ್ಗೆ ತಿಳಿದುಕೊಳ್ಳುವುದು.

೪) ಕಲೆ ಹಾಕಿದ ಮಾಹಿತಿ, ದತ್ತಾಂಶಗಳ ಆಧಾರದ ಮೇಲೆ ಯೋಜನೆಯ ಫಲಶೃತಿಯನ್ನು ತಿಳಿದುಕೊಳ್ಳುವುದು.

೫) ಈ ಯೋಜನೆಯಡಿಯಲ್ಲಿ ಫಲಾನುಭವಿಗಳ ಅಧಿಕಾರ ಮತ್ತು ಹಕ್ಕುಗಳನ್ನು ಅಭ್ಯಸಿಸುವುದು.

೬) ದತ್ತಾಂಶಗಳ ವಿಶ್ಲೇಷಣೆಯಿಂದ ಕಂಡುಕೊಂಡ ಸಂಗತಿಗಳನ್ನು ತಿಳಿಸುವುದು ಮತ್ತು ಸಲಹೆಗಳನ್ನು ಒದಗಿಸುವುದು.

**೧.೬ ಸಂಶೋಧನಾ ವಿಧಾನ :**

ಆಯ್ದುಕೊಂಡ ವಿಷಯವನ್ನು ಸುವ್ಯವಸ್ಥಿತವಾಗಿ ಅಧ್ಯಯನ ಮಾಡಲು, ಸಾಮಾಜಿಕ ವಿಜ್ಞಾನಗಳಲ್ಲಿ ಸಾಮಾನ್ಯವಾಗಿ ಅನುಸರಿಸುವ ಮಾದರಿ ವಿಧಾನವನ್ನು ದತ್ತಾಂಶ ಸಂಗ್ರಹದಲ್ಲಿ

ಪ್ರಮುಖವಾಗಿ ಆಯ್ದುಕೊಳ್ಳಲಾಗಿದೆ. ಪ್ರಾಥಮಿಕ ಮಾಹಿತಿಯನ್ನು ಪಡೆಯುವಲ್ಲಿ ಇವುಗಳ ಪಾತ್ರ ಅಗಾಧವೆಂದು ಎಲ್ಲರಿಗೂ ತಿಳಿದ ಸಂಗತಿ.

ಫಲಾನುಭವಿಗಳ ಆಯ್ಕೆ ಮಾಡುವಲ್ಲಿ ಹೆಚ್ಚು ವೈಜ್ಞಾನಿಕ, ಅನುಕೂಲಕರ ವಿಧಾನವೆಂದು ಪ್ರಸಿದ್ಧಿ ಪಡೆದ ಮಾದರಿ ವಿಧಾನ ಅನುಸರಿಸಲಾಗಿದೆ. ಅದರಲ್ಲೂ ಸ್ತರ ವಿಧಾನ ಪದ್ಧತಿಯನ್ನು ಅಳವಡಿಸಿಕೊಳ್ಳಲಾಗಿದೆ.

ಈ ವಿಧಾನದ ಅನ್ವಯ ಒಟ್ಟು ೧೦೩ ಫಲಾನುಭವಿಗಳನ್ನು ಅಧ್ಯಯನದ ವ್ಯಾಪ್ತಿ ಕ್ಷೇತ್ರದ ಪ್ರತಿ ವಿಭಾಗಗಳಿಂದ ಆಯ್ಕೆ ಮಾಡಲಾಗಿದ್ದು, ಎಲ್ಲ ವರ್ಗದವರಿಗೆ ಪ್ರಾತಿನಿತ್ಯ ಕೊಡಲಾಗಿದೆ. ಮೂಲ ಗ್ರಾಮನಿವಾಸಿಗಳ ಮತ್ತು ವಲಸಿಗರ ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಮಟ್ಟ ಮುಂತಾದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಮಾದರಿ ವಿಧಾನ ಅನ್ವಯ ದತ್ತಾಂಶ ಸಂಗ್ರಹ ಮಾಡಲಾಗಿದೆ.

ಅಧ್ಯಯನದ ವಿಷಯ ನಿರೂಪಣೆಯಲ್ಲಿ ಪ್ರಾಥಮಿಕ ದತ್ತಾಂಶಗಳ ಜೊತೆಗೆ ಅನುಸಂಗಿಕ ದತ್ತಾಂಶಗಳನ್ನು ಕೂಡಾ ಸೂಕ್ತ ರೀತಿಯಲ್ಲಿ ಸಾಂದರ್ಭಿಕವಾಗಿ ಬಳಸಲಾಗಿದೆ. ಅಧ್ಯಯನದ ವಿಷಯದ ಸ್ಪಷ್ಟ ನಿರೂಪಣೆಗಾಗಿ ಸಂಖ್ಯಾ ಶಾಸ್ತ್ರದ ಕೆಲವು ಸಾಧನಗಳನ್ನು ಬಳಸಲಾಗಿದೆ.

**೧.೭ ಅಧ್ಯಯನದಲ್ಲಿ ಒಳಗೊಂಡಿರುವ ಅಧ್ಯಾಯಗಳು :**

ಬೆಳಗಲಿ ಗ್ರಾಮ ಪಂಚಾಯತಿಯಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಸಮರ್ಥ ಅನುಷ್ಠಾನದ ಪರಿಣಾಮವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಈ ಅಧ್ಯಯನ ಕೈಕೊಳ್ಳಲಾಗಿದೆ. ಈ ಅಧ್ಯಯನವು ೬ ಅಧ್ಯಾಯಗಳನ್ನು ಒಳಗೊಂಡಿದೆ.

**ಅಧ್ಯಾಯ ಒಂದು : ಅಧ್ಯಯನದ ವಿಷಯ ಸಮರ್ಥನೆ, ಉದ್ದೇಶ ಮತ್ತು ಸ್ವರೂಪ**

ಈ ಅಧ್ಯಾಯದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವಿಷಯ ಸಮರ್ಥನೆ, ಅದರ ಉದ್ದೇಶಗಳು ಮತ್ತು ಸ್ವರೂಪ, ಬೆಳಗಲಿಯ ಭೌಗೋಳಿಕತೆ, ಅಧ್ಯಯನದ ಪ್ರಸ್ತುತತೆ, ಅಧ್ಯಯನದ ಉದ್ದೇಶ ಮತ್ತು ಅಧ್ಯಾಯದ ಇತಿ-ಮಿತಿಗಳ ಬಗೆಗಿನ ವಿವರವಾದ ವಿಷಯಗಳನ್ನು ಒಳಗೊಂಡಿದೆ.

**ಅಧ್ಯಾಯ ಎರಡು : ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅರ್ಥ, ವ್ಯಾಪ್ತಿ ಉಗಮ ಮತ್ತು ವಿಕಾಸ**

ಈ ಅಧ್ಯಾಯದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅರ್ಥ, ಅದರ ವ್ಯಾಪ್ತಿ ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿಯ ಉಗಮ ಹಾಗೂ ವಿಕಾಸದ ಬಗೆಗಿನ ವಿಷಯಗಳನ್ನು ಒಳಗೊಂಡಿರುತ್ತದೆ.

**ಅಧ್ಯಾಯ ಮೂರು : ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ**

ಈ ಅಧ್ಯಾಯದಲ್ಲಿ ಫಲಾನುಭವಿಗಳ ಆಯ್ಕೆ ವಿಧಾನ, ಅವರಿಗೆ ಒದಗಿಸಬೇಕಾದ ಸೌಲತ್ತುಗಳು, ಪಾವತಿಸಬೇಕಾದ ಕೂಲಿ ಮುಂತಾದ ವಿಷಯಗಳ ಕುರಿತ ಮಾಹಿತಿಯನ್ನು ಒಳಗೊಂಡಿರುತ್ತದೆ.

**ಅಧ್ಯಾಯ ನಾಲ್ಕು : ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶಗಳು ಮತ್ತು ಕಾರ್ಯಕ್ರಮಗಳು**

ಈ ಅಧ್ಯಾಯವು ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳ ಹಂತ ಹಂತ ಅನುಷ್ಠಾನದ ಬಗ್ಗೆ, ಅದರ ಉದ್ದೇಶಗಳ ಬಗ್ಗೆ ವಿವರಣೆಯನ್ನು ಹೊಂದಿರುತ್ತದೆ.

**ಅಧ್ಯಾಯ ಐದು : ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಬೆಳಗಲಿ ಗ್ರಾಮದ ದತ್ತಾಂಶಗಳ ವಿಶ್ಲೇಷಣೆ**

ಈ ಅಧ್ಯಾಯವು ಅಧ್ಯಯನಕ್ಕಾಗಿ ಪ್ರಾಥಮಿಕ ದತ್ತಾಂಶಗಳ ಮತ್ತು ಅನುಸಂಘಿಕವಾಗಿ ಸಂಗ್ರಹಿಸಿದ ದತ್ತಾಂಶಗಳನ್ನು ವಿಶ್ಲೇಷಿಸುವ, ಅದರ ಪ್ರಭಾವ, ಪ್ರತಿಫಲವನ್ನು ಹಾಗೂ ಈ ಯೋಜನೆಯ ಮೂಲ ಉದ್ದೇಶಗಳನ್ನು ಯಾವ ರೀತಿಯಾಗಿ ಸಾಕಾರಗೊಳಿಸಲಾಗಿದೆ ಎಂಬುದನ್ನು ಪರೀಕ್ಷಿಸಲಾಗಿದೆ.

**ಅಧ್ಯಾಯ ಆರು : ಸಮಾರೋಪ ಮತ್ತು ಸಲಹೆಗಳು**

ಈ ಅಧ್ಯಾಯವು, ಅಧ್ಯಯನದಲ್ಲಿಯ ಮೊದಲ ಐದು ಅಧ್ಯಾಯದಲ್ಲಿನ ಮತ್ತು ದತ್ತಾಂಶಗಳ ವಿಶ್ಲೇಷಣೆಯಿಂದ ಕಂಡುಕೊಂಡ ಸಂಗತಿಗಳ ಆಧಾರದ ಮೇಲೆ ಸಲಹೆಗಳನ್ನು ಹೇಳುವುದರ ಬಗೆಗಿನ ವಿಷಯಗಳನ್ನು ಒಳಗೊಂಡಿದೆ.

**೧.೮ ಅಧ್ಯಯನದ ಪ್ರಸ್ತುತತೆ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮದ ಕುರಿತು ಒಂದು ಅಧ್ಯಯನವು ಬಹಳ ಪ್ರಸ್ತುತವಾಗಿದೆ. ಈ ಅಧ್ಯಯನದಿಂದ ಬೆಳಗಲಿ ಗ್ರಾಮದ ಭಾಗದಲ್ಲಿಯ ವಿವಿಧ ವರ್ಗಗಳ ಜನತೆಗೆ ಪ್ರಯೋಜನಕಾರಿಯಾಗಿದೆ. ಈ ಅಧ್ಯಾಯವು ೧. ಫಲಾನುಭವಿಗಳಿಗೆ ದೊರೆಯುವ ಪ್ರಯೋಜನೆಗಳು, ೨. ಸಮಾಜಕ್ಕೆ ಲಭ್ಯವಾಗುವ ಪ್ರಯೋಜನೆಗಳು ಮತ್ತು ೩. ಜ್ಞಾನಸಂಪತ್ತಿಗೆ ಯಾವ ರೀತಿಯ ಕೊಡುಗೆ ನೀಡುತ್ತದೆ ಎಂದು ವಿವರಿಸಲಾಗಿದೆ.

**೧. ಫಲಾನುಭವಿಗಳಿಗೆ ದೊರೆಯುವ ಪ್ರಯೋಜನಗಳು :**

- ಅಧ್ಯಯನವು ಫಲಾನುಭವಿಗಳಿಗೆ ವಿವಿಧ ಕಾಮಗಾರಿಗಳ ಬಗ್ಗೆ ಅರಿವು ಮೂಡಿಸುತ್ತದೆ.
- ವಯಸ್ಕ ಹಾಗೂ ದೈಹಿಕವಾಗಿ ಸದೃಢವಾಗಿರುವ ಭೂರಹಿತ ಕಾರ್ಮಿಕರು, ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ವರ್ಷದಲ್ಲಿ ಕನಿಷ್ಠ ೧೦೦ ದಿನಗಳ ಉದ್ಯೋಗ ಒದಗಿಸುವ ಖಾತರಿಯನ್ನು ನೀಡುತ್ತದೆ.

- ಫಲಾನುಭವಿಗಳಿಗೆ ಈ ಯೋಜನೆಯಲ್ಲಿ ತೊಡಗುವುದರಿಂದ ನಿಯತಕಾಲಿಕವಾಗಿ ಕೂಲಿ ದೊರಕಿಸಿಕೊಳ್ಳುವಂತೆ ಜಾಗೃತಿಯನ್ನು ಮೂಡಿಸುತ್ತದೆ.
- ಫಲಾನುಭವಿಗಳಿಗೆ ಇರುವ ಹಕ್ಕು ಮತ್ತು ಅಧಿಕಾರಗಳ ಬಗ್ಗೆ ಅರಿವನ್ನು ಮೂಡಿಸುತ್ತದೆ.
- ಗ್ರಾಮೀಣ ಜನತೆಗೆ ಉದ್ಯೋಗದ ಭರವಸೆ ಇರುವುದರಿಂದ ಉದ್ಯೋಗ ಅರಸಿಕೊಂಡು ಹೋಗುವುದನ್ನು ತಪ್ಪಿಸುತ್ತದೆ.

**೨. ಸಮಾಜಕ್ಕೆ ಲಭ್ಯವಾಗುವ ಪ್ರಯೋಜನಗಳು :**

- ಈ ಅಧ್ಯಯನವು ಜನರಿಗೆ ಉದ್ಯೋಗ ಭರವಸೆಯನ್ನು ಒದಗಿಸುವುದರಿಂದ ಫಲಾನುಭವಿಗಳ ವರಮಾನ ನಿಯತಕಾಲಿಕ ದೊರೆಯುವುದರಿಂದ, ಸಮರ್ಥ ಮಾನವ ಸಂಪನ್ಮೂಲದ ಸದ್ಬಳಕೆಗೆ ಅವಕಾಶ ಒದಗಿಸಿಕೊಡುತ್ತದೆ.
- ಉದ್ಯೋಗ ಭರವಸೆಯಿಂದಾಗಿ ಗ್ರಾಮೀಣ ಜನತೆ ವಲಸೆ ಹೋಗುವುದನ್ನು ತಡೆಗಟ್ಟುತ್ತದೆ.
- ವ್ರತಾ ಕಾಲಹರಣ ಮಾಡದೆ, ದುಶ್ಚಟಗಳಿಗೆ ಬಲಿಯಾಗದೆ ಮತ್ತು ಶ್ರಮವಹಿಸಿ ಪ್ರತಿಫಲ ಪಡೆಯುವಂತೆ ಮನವರಿಕೆ ಮಾಡಿಕೊಟ್ಟು ಉತ್ತಮ ಮತ್ತು ಸದೃಢ ಸಮಾಜ ಕಟ್ಟಲು ನೆರವಾಗುತ್ತದೆ.
- ಈ ಯೋಜನೆಯಿಂದ ಸಮಾಜದ ಸಂಪತ್ತು ವೃದ್ಧಿಯಾಗುತ್ತದೆ.

**೩. ಜ್ಞಾನ ಸಂಪತ್ತಿಗೆ ಕೊಡುಗೆ :**

ಈ ಅಧ್ಯಯನದಿಂದ ಸಂಶೋಧನಾ ವಿದ್ಯಾರ್ಥಿಗಳಿಗೆ, ಬುದ್ಧಿಜೀವಿಗಳಿಗೆ ಹಾಗೂ ಚಿಂತನಾಶೀಲರಿಗೆ ಜ್ಞಾನ ವೃದ್ಧಿಸಿಕೊಳ್ಳಲು ಅವಕಾಶ ಒದಗಿಸಿಕೊಡುತ್ತದೆ. ಈ ಪ್ರಯತ್ನವು ಜ್ಞಾನ ಸಮುದ್ರಕ್ಕೆ ಸೇರಿ ಆ ಸಮುದ್ರ ವೃದ್ಧಿಯಾಗುವಂತೆ ಮಾಡುತ್ತದೆ.

**೧.೯ ಅಧ್ಯಯನದ ಇತಿ-ಮಿತಿಗಳು :**

೧. ಈ ಅಧ್ಯಯನವು ಬೆಳಗಲಿ ಗ್ರಾಮ ಪಂಚಾಯತಿಯ ಕಾರ್ಯಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿದೆ.

೨. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕುರಿತು ಮಾತ್ರ ಅಧ್ಯಯನ ಮತ್ತು ಸಮೀಕ್ಷೆ ಕೈಗೊಳ್ಳಲಾಗಿದೆ.

೩. ಇದೊಂದು ಸೂಕ್ಷ್ಮ (ಮೈಕ್ರೊ) ಅಧ್ಯಯನವಾಗಿದ್ದು ಇದರ ಅಡಿಯಲ್ಲಿಯ ನಿರ್ಣಯಗಳನ್ನು ಸಾರ್ವತ್ರಿಕವಾಗಿ ಅನ್ವಯಿಸಲು ಸಾಧ್ಯವಾಗಲಾರದು.

೪. ಈ ಅಧ್ಯಯನವು ಎಪ್ರಿಲ್ ೨೦೦೮ ರಿಂದ ಬೆಳಗಲಿ ಗ್ರಾಮ ಪಂಚಾಯತಿ ಕ್ಷೇತ್ರದಲ್ಲಿ ಅನುಷ್ಠಾನದಲ್ಲಿ ತಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳಿಗೆ ಮಾತ್ರ ಸೀಮಿತವಾಗಿದೆ.

# ಅಧ್ಯಾಯ ಎರಡು
# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

೨.೧ ಅರ್ಥ

೨.೨ ವ್ಯಾಪ್ತಿ

೨.೩ ಉಗಮ ಹಾಗೂ ವಿಕಾಸ

೨.೪ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮತ್ತು ಪರಿವರ್ತಕ ವಿಧಾನಗಳು

೨.೫ ಬಡತನ ನಿರ್ಮೂಲನೆ ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಗುರಿ ಹಾಗೂ ಸಾಧನೆ

೨.೬ ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮಗಳು

೨.೭ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮತ್ತು ಪಂಚಾಯಿತಿಗಳ ಪಾತ್ರ

# ಅಧ್ಯಾಯ ಎರಡು
# ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ

**೨.೧ ಅರ್ಥ :**

ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಅಭಿವೃದ್ಧಿಯಾಗದ ಹೊರತು ದೇಶದ ಅಭಿವೃದ್ಧಿ ಸಾಧ್ಯವಿಲ್ಲ ಎಂದು ಮಹಾತ್ಮ ಗಾಂಧೀಜಿಯವರು ಗ್ರಾಮೀಣಾಭಿವೃದ್ಧಿಯ ಬಗ್ಗೆ ಒಲವನ್ನು, ಚಿಂತನೆಯನ್ನು ಮಾಡಿದ್ದರು. ಪೂರಕವೆಂಬಂತೆ ವಿವಿಧ ಕಾಲಘಟ್ಟಗಳಲ್ಲಿ ಕಾರ್ಯನಿರ್ವಹಿಸಿದ ಸರಕಾರಗಳು ಪಂಚವಾರ್ಷಿಕ ಯೋಜನೆಗಳುದ್ದಕ್ಕೂ ಗ್ರಾಮೀಣಾಭಿವೃದ್ಧಿಯ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಿಕೊಂಡು ಬರುತ್ತಿವೆ. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷಿ ಯೋಜನೆಯಾಗಿದ್ದು ರಾಜ್ಯದಲ್ಲಿ ಫೆಬ್ರವರಿ ೨೦೦೬ ರಿಂದ ಐದು ಜಿಲ್ಲೆಗಳಲ್ಲಿ ಆರಂಭಗೊಂಡು ಪ್ರಸ್ತುತ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಾರಿಗೆ ಬಂದಿರುವುದು ಪ್ರಗತಿಪರ ವಿಚಾರವಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ವಯಸ್ಕ ಉದ್ಯೋಗಾಕಾಂಕ್ಷಿಗಳಿಗೆ ವರ್ಷದಲ್ಲಿ ಕನಿಷ್ಟ ನೂರು ದಿನಗಳ ಉದ್ಯೋಗಾವಕಾಶವನ್ನು ಕಲ್ಪಿಸಿ ಅವರ ಆರ್ಥಿಕ ಮಟ್ಟವನ್ನು ಸುಧಾರಿಸುವುದೇ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಗುರಿಯಾಗಿದೆ.

ಸ್ವಇಚ್ಛೆಯಿಂದ ಅರ್ಜಿ ಸಲ್ಲಿಸುವ, ಅಕುಶಲ ದೈಹಿಕ ಕೆಲಸ ಬಯಸುವ, ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರಿಗೆ ಪ್ರತಿ ಕುಟುಂಬದ ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವುದು ಮತ್ತು ಗ್ರಾಮೀಣ ಜನರಿಗೆ ದೀರ್ಘಕಾಲದ ಜೀವನೋಪಾಯದ ಮಾರ್ಗಗಳನ್ನು ಬಲಪಡಿಸುವ ಧ್ಯೇಯ ಹೊಂದಿರುವ ಸರಕಾರಿ ಯೋಜನೆಯೇ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಾಗಿದೆ.

ಸಂವಿಧಾನದ ೭೩ ನೇ ತಿದ್ದುಪಡಿಯ ಪ್ರಕಾರ 'ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩'ರ ಅನ್ವಯ ಮೂರು ಹಂತದ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸ್ಥಾಪಿಸಿ, ವಿಕೇಂದ್ರೀಕರಣದ ತತ್ವದ ಹಿನ್ನೆಲೆಯಲ್ಲಿ ಅಧಿಕಾರ, ಅನುದಾನ ಹಾಗೂ ಅಧಿಕಾರಿಗಳನ್ನು ಎರಡು ದಶಕಗಳಿಗೂ ಹಿಂದೆಯೇ ಸಂಸ್ಥೆಗಳಿಗೆ ಒದಗಿಸಿದ ಮೊದಲ ರಾಜ್ಯ ಕರ್ನಾಟಕ ಎಂಬುದು ಗಮನಾರ್ಹ ಸಂಗತಿ. ಇದುವರೆಗೆ ಆಡಳಿತ ನೀಡಿರುವ ಎಲ್ಲಾ ಸರ್ಕಾರಗಳು ಕೆಳಹಂತದ ಸ್ಥಳೀಯ ಸರ್ಕಾರಗಳಿಗೆ ರಾಜಕೀಯ, ಆಡಳಿತ ಹಾಗೂ ಆರ್ಥಿಕ ವಿಕೇಂದ್ರಿಕರಣದ ಮೂಲಕ ಹೆಚ್ಚಿನ ಸ್ವಾಯತ್ತತೆ ಮತ್ತು ಅಧಿಕಾರವನ್ನು ನೀಡುವುದು ಹಾಗೂ ನೀಡುತ್ತಾ ಬರುತ್ತಿರುವುದು ಪ್ರಜಾಪ್ರಭುತ್ವಕ್ಕೆ ನೀಡಿರುವ ನಿಜವಾದ ಮನ್ನಣೆ ಎನ್ನಬಹುದು. ಈ ಹಿನ್ನಲೆಯಲ್ಲಿ ನಮ್ಮ ರಾಜ್ಯದ ಪಂಚಾಯತ್ ರಾಜ್ ವ್ಯವಸ್ಥೆಯು ದೇಶದಲ್ಲಿ ತನ್ನ ಅಸ್ತಿತ್ವವನ್ನು ಪರಿಚಯಿಸಿಕೊಂಡಿದೆ ಮತ್ತು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನು ಸಮರ್ಥವಾಗಿ ಅನುಷ್ಠಾನಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

**೨.೨ ವ್ಯಾಪ್ತಿ :**

**ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ** (ಕೇಂದ್ರ ಸರ್ಕಾರದ ಮಹತ್ತರ ಯೋಜನೆಯಾಗಿದೆ. ಅಕುಶಲ ದೈಹಿಕ ಕೆಲಸ ಮಾಡಲು ಇಚ್ಛಿಸುವ ಗ್ರಾಮೀಣ ಪ್ರದೇಶದ ವಯಸ್ಕರಿಗೆ ಒಂದು ಆರ್ಥಿಕ ವರ್ಷದಲ್ಲಿ ಕನಿಷ್ಟ ನೂರು ದಿನಗಳ ಉದ್ಯೋಗಾವಕಾಶಗಳನ್ನು ಸ್ಥಳೀಯವಾಗಿ ನೀಡಿ, ಬಡ ಜನರ ಬದುಕನ್ನು ಹಸನಾಗಿಸುವುದು ಯೋಜನೆಯ ಮುಖ್ಯ ಉದ್ದೇಶ) ರಾಜ್ಯದಲ್ಲಿ ಫೆಬ್ರವರಿ ೨೦೦೬ ರಿಂದ ಐದು ಜಿಲ್ಲೆಗಳಲ್ಲಿ ಪ್ರಾರಂಭಗೊಂಡು, ಪ್ರಸಕ್ತ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕಾರ್ಯಾಚರಣೆಗೊಂಡಿರುವ ಯೋಜನೆಯು ಪ್ರಗತಿಯ ಪಥದಲ್ಲಿದೆ. ಹವಾಮಾನ ಪರಿಸ್ಥಿತಿಗೆ ಅನುಗುಣವಾಗಿ ಹಳ್ಳಿಗಳಲ್ಲಿ ವರ್ಷದ ಎಲ್ಲಾ ದಿನಗಳಲ್ಲೂ ದುಡಿಯುವ ಜನಕ್ಕೆ ಕೆಲಸ ಇರುವುದಿಲ್ಲ. ಇದ್ದರೂ ಕೂಲಿ ನೀಡುವಿಕೆಯಲ್ಲಿ ಗಂಡು - ಹೆಣ್ಣುಗಳಿಗೆ ತಾರತಮ್ಯ ಮಾಡುವುದು ವಾಸ್ತವ ಸಂಗತಿಯಾಗಿದೆ. ಸ್ಥಳೀಯವಾಗಿ ಕೆಲಸವಿಲ್ಲದೆ ಇದ್ದಾಗ ಉದ್ಯೋಗ ಅರಸಿ ನಗರ ಪ್ರದೇಶಗಳಿಗೆ ಗುಳೆ ಹೋಗುವ ಪರಿಸ್ಥಿತಿಯನ್ನು ನಿಯಂತ್ರಿಸುವಲ್ಲಿ ಈ ಯೋಜನೆ ಪರಿಹಾರ ನೀಡಿದೆ.

ಈ ಹಿನ್ನೆಲೆಯಲ್ಲಿ ಗ್ರಾಮೀಣ ಜನರ ಬದುಕನ್ನು ಹಸನುಗೊಳಿಸುವ ನಿಟ್ಟಿನಲ್ಲಿ, ದುಡಿಯುವ ಸಾಮರ್ಥ್ಯ, ಅಗತ್ಯತೆ ಮತ್ತು ಗಂಡು ಹೆಣ್ಣೆಂಬ ಲಿಂಗ ತಾರತಮ್ಯವಿಲ್ಲದೆ ಒಂದಷ್ಟು ಉದ್ಯೋಗವನ್ನು ದುಡಿಯುವ ಕೈಗಳಿಗೆ ಒದಗಿಸಬೇಕು. ದುಡಿಮೆಯಿಂದ ಸ್ವಾವಲಂಬಿ ಬದುಕನ್ನು ನಡೆಸುವ ಅವಕಾಶ ಕಲ್ಪಿಸುವುದು ಇವತ್ತಿನ ಕಾಲಘಟ್ಟದ ಮಹತ್ವದ ಆದ್ಯತೆಗಳಲ್ಲಿ ಒಂದಾಗಿದೆ. ತನ್ಮೂಲಕ ಸುಸ್ಥಿರ ಸಮಾಜವನ್ನು ಕಟ್ಟುವ ಆಶಯವೂ ಸಹ ಇದರಲ್ಲಿ ಒಳಗೊಂಡಿದೆ.

ಸ್ವಾತಂತ್ರ್ಯಾ ನಂತರದ ಮುನ್ನಡೆಯಲ್ಲಿ ನಿರುದ್ಯೋಗ ನಿವಾರಣೆ, ಹಳ್ಳಿಗಳ ಅಭಿವೃದಿಗೆ ಹೆಚ್ಚು ಒತ್ತು ನೀಡಲಾಗುತ್ತಾ ಬಂದಿರುವುದನ್ನು ಮತ್ತು ಬರುತ್ತಿರುವುದನ್ನು ನಾವು ಮನಗಂಡಿದ್ದೇವೆ. ಈ ಹಾದಿಯಲ್ಲಿ ಫೆಬ್ರವರಿ ೨೦೦೬ ರಿಂದ ಜಾರಿಗೆ ಬಂದಿರುವ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ನಮ್ಮ ರಾಜ್ಯದಲ್ಲಿ ಮೊದಲು ೫ ಜಿಲ್ಲಗಳಲ್ಲೂ, ನಂತರ ಏಪ್ರೀಲ್ ೨೦೦೭ ರಿಂದ ೨ ನೇ ಹಂತದ ೬ ಜಿಲ್ಲೆಗಳಲ್ಲೂ ಅಬಯಿನುಷ್ಠಾನದಲ್ಲಿರುತ್ತದೆ. ಈ ಯೋಜನೆಯ ಅಗತ್ಯತೆಯನ್ನು ಮನಗಂಡಿರುವ ಸರ್ಕಾರ ಇದೇ ಏಪ್ರೀಲ್ ೨೦೦೮ ರಿಂದ ರಾಜ್ಯದ ಉಳಿದ ೧೮ ಜಿಲ್ಲೆಗಳಲ್ಲೂ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೆ ತಂದಿದೆ.

ಯಾವುದೇ ಗ್ರಾಮೀಣ ಪರವಾದಂತಹ ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕಾದರೆ ಜನರ ಸಹಭಾಗಿತ್ವ ಅತ್ಯಗತ್ಯ. ಈ ಪಾಲ್ಗೊಳ್ಳುವಿಕೆ ಗಣನೀಯವಾಗಿ ಗರಿಷ್ಠಗೊಳ್ಳಲು ಅಧಿಕಾರಿಗಳ ಹೊಣೆಗಾರಿಕೆಯೂ ಅಷ್ಟೇ ಮಹತ್ವದಾಗಿರುತ್ತದೆ.

**೨.೩ ಉದ್ಯೋಗ ಭರವಸೆ ಯೋಜನೆಯ : ಉಗಮ ಹಾಗೂ ವಿಕಾಸ**

ಇದರ ಇತಿಹಾಸವನ್ನು ಗಮನಿಸಿದಾಗ, ಸ್ವತಂತ್ರ ಪೂರ್ವದಲ್ಲಿ ಬ್ರಿಟಿಷ್ ಆಡಳಿತದಲ್ಲಿ ಲಾರ್ಡ್ ರಿಪ್ಪನ್ ೧೮೮೨ ರಲ್ಲಿ ಜಾರಿಗೆ ತಂದ ಸುಧಾರಣಾ ಕ್ರಮಗಳಿಂದ ಪ್ರೇರಿತವಾಗಿ

ವಿಕೇಂದ್ರೀಕರಣಕ್ಕೆ ಪ್ರಯತ್ನ ದೊರೆಯಿತು. ೧೯೫೨ ರಲ್ಲಿ ಸಮುದಾಯ ಅಭಿವೃದ್ಧಿ ಆಂದೋಲನ ಆರಂಭವಾಯಿತು. ಇದರಲ್ಲಿ ಕೃಷಿ, ಪಶು ಸಂಗೋಪನೆ, ಗ್ರಾಮೀಣ ಕೈಗಾರಿಕೆ, ಆರೋಗ್ಯ ಮಹಿಳೆಯರ ಅಭಿವೃದ್ಧಿ ಒಟ್ಟಾರೆ ಸಮಗ್ರ ಗ್ರಾಮೀಣ ಅಭಿವೃದ್ಧಿಗಾಗಿ ಸಮುದಾಯ ಅಭಿವೃದ್ಧಿ ಆಂದೋಲನ ಆರಂಭವಾಯಿತು. ೧೯೬೦ ರಲ್ಲಿ ಭೂಸುಧಾರಣಾ ಕ್ರಮ ಜಾರಿಗೆ ಬಂದಿತು. ೧೯೬೧ ರಲ್ಲಿ ರಾಷ್ಟ್ರೀಯ ಮಾನವ ಶಕ್ತಿ ಕಾರ್ಯಕ್ರಮ (ಆರ್.ಎಮ್.ಪಿ.) ದೇಶದಲ್ಲಿ ಜಾರಿಗೆ ಬಂದಿತು. ನಿರ್ದಿಷ್ಟ ಪ್ರದೇಶಗಳಲ್ಲಿ ಮಾತ್ರ ಉದ್ಯೋಗದ ಅವಶ್ಯಕತೆ ಇರುವ ಗ್ರಾಮೀಣ ಕೂಲಿಕಾರರಿಗೆ ವರ್ಷದಲ್ಲಿ ನೂರು ದಿನಗಳ ದುಡಿಮೆ ಒದಗಿಸುವ ಗುರಿಯನ್ನು ಹೊಂದಲಾಗಿತ್ತು. ೧೯೭೧ ರಲ್ಲಿ ಗ್ರಾಮೀಣ ಉದ್ಯೋಗಕ್ಕಾಗಿ ತ್ವರಿತ ಕಾರ್ಯಕ್ರಮ ಆರಂಭಿಸಲಾಯಿತು. ಇದರ ಪ್ರಕಾರ ಈ ಕಾರ್ಯಕ್ರಮದ ಮೂಲಕ ರಾಷ್ಟ್ರೀಯ ಮಾನವ ಶಕ್ತಿ ಕಾರ್ಯಕ್ರಮದ (ಎಮ್.ಪಿ.) ಅನುಷ್ಠಾನದ ವ್ಯಾಪ್ತಿಯನ್ನು ವಿಸ್ತರಿಸಲಾಯಿತು. ೧೯೭೬ ರಲ್ಲಿ ೨೦ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು.

೧೯೭೭-೧೯೮೯ ರ ಅವಧಿಯಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (ಎನ್.ಆರ್.ಇ.ಪಿ.) ಜಾರಿಯಲ್ಲಿತ್ತು. ಇದರ ಪ್ರಕಾರ ಸಂಗ್ರಹದಲ್ಲಿರುವ ಹೆಚ್ಚುವರಿ ಆಹಾರ ಧಾನ್ಯ ಬಳಸಿ ಗ್ರಾಮೀಣ ಮೂಲಭೂತ ಸೌಕರ್ಯ ಸೃಷ್ಟಿಸುವುದು ಹಾಗೂ ದುಡಿಯುವ ಕೈಗಳಿಗೆ ಕೆಲಸ ಒದಗಿಸುವುದು ಇದರ ಗುರಿಯಾಗಿತ್ತು.

ಗ್ರಾಮೀಣ ಪ್ರದೇಶದಲ್ಲಿನ ಜನರಿಗೆ ಹೆಚ್ಚು ಉದ್ಯೋಗಾವಕಾಶಗಳನ್ನು ಒದಗಿಸಿ ಬಡತನವನ್ನು ಹೋಗಲಾಡಿಸುವ ದೃಷ್ಟಿಯಿಂದ ಸರಕಾರ ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ. ಅವುಗಳಲ್ಲಿ ಉದ್ಯೋಗ ಖಾತರಿ ಯೋಜನೆ, ಕಾಳಿಗಾಗಿ ಕೆಲಸ, ಸಣ್ಣ ರೈತರ ಅಭಿವೃದ್ಧಿ ಯೋಜನೆ, ಅತಿ ಸಣ್ಣ ರೈತರ ಹಾಗೂ ಕೃಷಿ ಕಾರ್ಮಿಕರ ಅಭಿವೃದ್ಧಿ ಯೋಜನೆ, ಬರಪೀಡಿತ ಕ್ಷೇತ್ರಾಭಿವೃದ್ಧಿ ಯೋಜನೆ, ಮುಂತಾದವುಗಳು ಪ್ರಮುಖವಾಗಿವೆ. ಆದರೆ ಆರನೇಯ ಯೋಜನೆಯ ಅವಧಿಯಲ್ಲಿ ಈ ಹಲವಾರು ಕಾರ್ಯಕ್ರಮಗಳ ಬದಲಾಗಿ, ಇವೆಲ್ಲವುಗಳ ಉದ್ದೇಶಗಳನ್ನೊಳಗೊಂಡ ಒಂದೇ ಒಂದು ಸಮಗ್ರ ಯೋಜನೆಯನ್ನು ರೂಪಿಸಲು ಯೋಜಿಸಲಾಯಿತು. ಇದರ ಪರಿಣಾಮವಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ (ಆಯ್.ಆರ್.ಡಿ.ಪಿ.) ಪ್ರಾರಂಭಿಸಲ್ಪಟ್ಟಿತು. ಈ ಕಾರ್ಯಕ್ರಮವನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಎಂದು ಕರೆಯಲು ಅನೇಕ ಕಾರಣಗಳಿವೆ. ಈ ಹಿಂದೆ ಹಮ್ಮಿಕೊಂಡ ಉದ್ಯೋಗ ಖಾತರಿ ಯೋಜನೆ (ಇ.ಜಿ.ಸಿ.), ಕಾಳಿಗಾಗಿ ಕೂಲಿ ಕಾರ್ಯಕ್ರಮ, ಸಣ್ಣ ರೈತರ ಅಭಿವೃದ್ಧಿ ಯೋಜನೆ ಇವೆಲ್ಲವೂ ಒಂದೊಂದು ಕ್ಷೇತ್ರಕ್ಕೆ ಸೀಮಿತವಾಗಿದ್ದವು. ಆದರೆ ಈ ಕಾರ್ಯಕ್ರಮ ಸಮಗ್ರವಾಗಿದೆ. ಹೇಗೆಂದರೆ ಗ್ರಾಮೀಣ ಬಡತನವನ್ನು ಹೋಗಲಾಡಿಸಲು ಪರಸ್ಪರ ಸಂಬಂಧ ಹೊಂದಿದೆ ಹಾಗೂ ಪೂರಕವಾದ ವಿವಿಧ ಕಾರ್ಯಕ್ರಮಗಳನ್ನು ಒಮ್ಮೆಗೇ ಪ್ರಾರಂಭಿಸುವದು ಇದರ ಲಕ್ಷಣ.

೧೯೮೩-೧೯೮೯ ರ ಅವಧಿಯಲ್ಲಿ ರಾಷ್ಟ್ರೀಯ ಗ್ರಾಮೀಣ ಭೂ ರಹಿತ ಉದ್ಯೋಗ ಖಾತರಿ ಕಾರ್ಯಕ್ರಮ (ಎಲ್.ಇ.ಜಿ.ಪಿ.) ಜಾರಿಯಲ್ಲಿತ್ತು. ಭೂರಹಿತ ಕೃಷಿ ಕಾರ್ಮಿಕರಿಗೆ ಉದ್ಯೋಗ ದೊರಕಿಸುವುದು ಕಾರ್ಯಕ್ರಮದ ಗುರಿಯಾಗಿತ್ತು. ೧೯೮೯-೯೪ ರ ಅವಧಿಯಲ್ಲಿ ಜವಾಹರ್ ರೋಜ್ಗಾರ್ ಯೋಜನೆ (ಎನ್.ಆರ್.ಇ.ಪಿ. + ಆರ್.ಎಲ್.ಇ.ಜಿ.ಪಿ.) ಜಾರಿಯಲ್ಲಿತ್ತು. ಇದರ ವಿಶೇಷತೆ ಏನೆಂದರೆ, ಗ್ರಾಮ ಪಂಚಾಯಿತಿಗಳಿಗೆ ಪ್ರಥಮ ಬಾರಿಗೆ ನೇರ ಅನುದಾನ ಬಿಡುಗಡೆ ಹಾಗೂ ಅನುಷ್ಠಾನದ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳಿಗೆ ವಹಿಸಲಾಗಿತ್ತು. ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗ ಸೃಷ್ಟಿಸುವುದು, ಗ್ರಾಮೀಣ ಬಡಜನರಿಗೆ ಅನುಕೂಲವಾಗುವ ಆಸ್ತಿಗಳ ನಿರ್ಮಾಣ ಮಾಡುವುದು, ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಚಟುವಟಿಕೆಗಳಿಗ ಪ್ರೇರಣೆ ನೀಡುವುದು, ಒಟ್ಟಾರೆ ಗ್ರಾಮೀಣ ಪ್ರದೇಶದ ಜನರ ಜೀವನ ಮಟ್ಟದಲ್ಲಿ ಸುಧಾರಣೆ ತರುವುದು ಈ ಯೋಜನೆಯ ಗುರಿಯಾಗಿತ್ತು.

೧೯೯೩-೯೪ ರ ಅವಧಿಯಲ್ಲಿ ಉದ್ಯೋಗ ಭರವಸೆ ಯೋಜನೆ (ಇ.ಎ.ಎಸ್.) ಜಾರಿಯಲ್ಲಿತ್ತು. ರಾಷ್ಟ್ರದಲ್ಲಿ ೧೭೭೨ ಹಿಂದುಳಿದ ತಾಲ್ಲೂಕುಗಳಲ್ಲಿ ಈ ಕಾರ್ಯಕ್ರಮವನ್ನು ಜಾರಿಗೊಳಿಸಲಾಯಿತು. ಬರಪೀಡಿತ, ಮರಳುಗಾಡು, ಬುಡಕಟ್ಟು ಹಾಗೂ ಗುಡ್ಡಗಾಡು ಪ್ರದೇಶಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. ಕೃಷಿ ಕೂಲಿ ಲಭ್ಯವಾಗದ ಅವಧಿಯಲ್ಲಿ ವರ್ಷಕ್ಕೆ ೧೦೦ ದಿನಗಳ ಕೆಲಸ ಕೊಡುವುದು ಈ ಕಾರ್ಯಕ್ರಮದ ಗುರಿಯಾಗಿತ್ತು. ಗ್ರಾಮೀಣ ಮೂಲಭೂತ ಸೌಕರ್ಯ ಒದಗಿಸುವುದು, ಸಮುದಾಯದ ಆಸ್ತಿ ನಿರ್ಮಾಣಕ್ಕೆ ಆದ್ಯತೆ ನೀಡುವುದು, ಜಲ ಮತ್ತು ಮಣ್ಣು ಸಂರಕ್ಷಣಾ ಕಾಮಗಾರಿಗಳು, ಸಣ್ಣ ನೀರಾವರಿ ಕಾಮಗಾರಿಗಳು, ಗ್ರಾಮೀಣ ರಸ್ತೆಗಳು, ಪ್ರಾಥಮಿಕ ಶಾಲೆಗಳ ಕಟ್ಟಡ ನಿರ್ಮಾಣ, ಅಂಗನವಾಡಿ ಕಟ್ಟಡಗಳ ನಿರ್ಮಾಣ ಮಾಡುವ ಉದ್ದೇಶವನ್ನು ಹೊಂದಲಾಗಿತ್ತು. ೧೯೯೩ ರಲ್ಲಿ ಪ್ರಧಾನ ಮಂತ್ರಿಗಳ ರೋಜ್ಗಾರ ಯೋಜನೆ (ಪಿ.ಎಮ್.ಆರ್.ವಾಯ್.) ಜಾರಿಗೆ ಬಂತು. ಇದರ ಪ್ರಕಾರ ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗಕ್ಕೆ ಸಾಲ/ಸಹಾಯಧನ ಒದಗಿಸುವ ಉದ್ದೇಶವನ್ನು ಹೊಂದಲಾಗಿತ್ತು.

೧೯೯೯ ರಿಂದ ೨೦೦೨ ರವರೆಗೆ ಜವಾಹರ್ ಗ್ರಾಮ ಸಮೃದ್ಧಿ ಯೋಜನೆ (ಜೆ.ಜಿ.ಎಸ್.ವಾಯ್.) ಜಾರಿಯಲ್ಲಿತ್ತು. ಸುಸ್ಥಿರವಾದ ಉದ್ಯೋಗ ಅವಕಾಶಗಳನ್ನು ಸೃಷ್ಟಿಸುವುದು, ಇದಕ್ಕೆ ಪೂರಕವಾದ ಉದ್ಯೋಗಗಳನ್ನು ಸೃಷ್ಟಿಸುವುದು, ಗ್ರಾಮೀಣ ಬಡವರ ಜೀವನ ಮಟ್ಟ ಸುಧಾರಣೆ ಮಾಡುವುದು, ಬೇಡಿಕೆ ಆಧಾರಿತ ಮೂಲಭೂತ ಸೌಕರ್ಯಗಳ ನಿರ್ಮಾಣ ಮಾಡುವುದು ಈ ಯೋಜನೆಯ ಉದ್ದೇಶವಾಗಿತ್ತು.

೨೦೦೧ ರಲ್ಲಿ ಸಂಪೂರ್ಣ ಗ್ರಾಮೀಣ ರೋಜ್ಗಾರ್ ಯೋಜನೆಯನ್ನು (ಎಸ್.ಜಿ.ಆರ್.ವಾಯ್. = ಇ.ಎ.ಎಸ್.+ಜೆ.ಜಿ.ಎಸ್.ವಾಯ್.) ಜಾರಿಗೆ ತರಲಾಯಿತು. ಈ ಯೋಜನೆಯಡಿ ಸಂಪೂರ್ಣವಾಗಿ ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ವಿಶಾಲ ಕಾರ್ಯ ವ್ಯಾಪ್ತಿಯನ್ನು ನೀಡಿ ಅನುಷ್ಠಾನಗೊಳಿಸಲಾಯಿತು. ಈ ಯೋಜನೆಯಲ್ಲಿ ಗ್ರಾಮೀಣ ಪ್ರದೇಶದ

ಬಡವರಿಗೆ ಹೆಚ್ಚುವರಿ ಉದ್ಯೋಗಾವಕಾಶ ಸೃಷ್ಟಿಸುವುದು, ಕೂಲಿ ರೂಪದಲ್ಲಿ ಆಹಾರ ಧಾನ್ಯಗಳನ್ನು ನೀಡುವುದು, ಹೆಚ್ಚು ಬಾಳಿಕೆ ಬರುವ ಸಮುದಾಯ ಆಸ್ತಿಗಳ ನಿರ್ಮಾಣ ಮಾಡುವುದು ಈ ಯೋಜನೆಯ ಗುರಿಯಾಗಿತ್ತು. ಸಾಮಾಜಿಕ, ಆರ್ಥಿಕ ಹಾಗೂ ಇತರೆ ಮೂಲ ಸೌಕರ್ಯಗಳನ್ನು ವೃದ್ಧಿಸುವುದು, ಮಹಿಳೆಯರು, ಅನುಸೂಚಿತ ಜಾತಿ / ಪಂಗಡ ಹಾಗೂ ಬಾಲಕಾರ್ಮಿಕತೆಯಿಂದ ಮುಕ್ತಿ ಹೊಂದಿದ ಮಕ್ಕಳ ಕುಟುಂಬಗಳ ಸದಸ್ಯರಿಗೆ ಈ ಯೋಜನೆಯಡಿಯಲ್ಲಿ ಉದ್ಯೋಗಾವಕಾಶ ಒದಗಿಸುವ ಗುರಿಯನ್ನು ಹೊಂದಲಾಗಿತ್ತು. ಇದಕ್ಕಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡುವುದು ಈ ಯೋಜನೆ ಅಡಿಯಲ್ಲಿ ಗ್ರಾಮ ಪಂಚಾಯಿತಿಗೆ ಶೇ. ೫೦, ತಾಲ್ಲೂಕು ಪಂಚಾಯಿತಿಗೆ ಶೇ. ೩೦, ಜಿಲ್ಲಾ ಪಂಚಾಯಿತಿಗೆ ಶೇ. ೨೦ ರಷ್ಟು ಅನುದಾನ ವಿನಿಯೋಗ ಅವಕಾಶ ಒದಗಿಸಲಾಗಿತ್ತು.

೨೦೦೪ ರಲ್ಲಿ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆ (ಎನ್.ಎಫ್.ಎಫ್.ಡಬ್ಲ್ಯೂ.ಪಿ.) ಜಾರಿಗೆ.ತರಲಾಯಿತು. ಈ ಯೋಜನೆಯನ್ನು ಯೋಜನಾ ಆಯೋಗದಿಂದ ಗುರುತಿಸಲ್ಪಟ್ಟ ದೇಶದ ೧೫೦ ಅತೀ ಹಿಂದುಳಿದ ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸುವ ಉದ್ದೇಶ ಹೊಂದಲಾಗಿತ್ತು. ಈ ಯೋಜನೆಯನ್ನು ಅತೀ ಹಿಂದುಳಿದ ಪ್ರದೇಶಗಳಲ್ಲಿ ಹೆಚ್ಚುವರಿ ಉದ್ಯೋಗ ಸೃಷ್ಟಿಸಲು ವಿಶೇಷ ಪ್ರಯತ್ನ ಮಾಡಲಾಗಿತ್ತು. ಈ ಯೋಜನೆಗೆ ಸಂಪೂರ್ಣ ಅನುದಾನವನ್ನು ಕೇಂದ್ರ ಸರ್ಕಾರದಿಂದ ಒದಗಿಸಲಾಗಿತ್ತು.

ದೇಶದಲ್ಲಿ ಬಡತನ ನಿರ್ಮೂಲನೆ ಹಾಗೂ ಸಮಗ್ರ ಗ್ರಾಮೀಣ / ನಗರ ಪ್ರದೇಶಗಳ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ಜಾರಿಗೆ ತರಲಾಯಿತು.

೧) ಪ್ರಧಾನಮಂತ್ರಿ ಗ್ರಾಮೀಣ ಸಡಕ್ ಯೋಜನೆ (ಪಿ.ಎಮ್.ಆರ್.ವಾಯ್.)
೨) ಇಂದಿರಾ ಆವಾಜ್ ಯೋಜನೆ (ಆಯ್.ಎ.ವಾಯ್.)
೩) ಸ್ವರ್ಣ ಜಯಂತಿ ಗ್ರಾಮ ಸ್ವ ರೋಜ್‌ಗಾರ್ ಯೋಜನೆ (ಎಸ್.ಜಿ.ಎಸ್.ವಾಯ್.)
೪) ಬರಗಾಲ ತಡೆಗಟ್ಟುವಿಕೆ ಕಾಮಗಾರಿಗಳು
೫) ಮರುಭೂಮಿ ಅಭಿವೃದ್ಧಿ ಕಾರ್ಯಕ್ರಮ
೬) ಸಮಗ್ರ ಬಂಜರು ಭೂಮಿ ಅಭಿವೃದ್ಧಿ ಕಾರ್ಯಕ್ರಮ (ಹರಿಯಾಲಿ)
೭) ಗ್ರಾಮೀಣ ವಸತಿ ಕಾರ್ಯಕ್ರಮಗಳು : ಆಶ್ರಯ, ಅಂಬೇಡ್ಕರ್, ನವಗ್ರಾಮ ವಸತಿ ಯೋಜನೆಗಳು,
೮) ವಾಲ್ಮೀಕಿ ಅಂಬೇಡ್ಕರ್ ಆವಾಜ್ ಯೋಜನೆ
೯) ಜಿಲ್ಲಾ ಗ್ರಾಮೀಣಾಭಿವೃದ್ಧಿ ಪ್ರಾಧಿಕಾರ
೧೦) ಜವಾಹರಲಾಲ್ ನೆಹರು ನಗರ ನವೀಕರಣ ಪ್ರಾಧಿಕಾರ

**೨.೪ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮತ್ತು ಪರಿವರ್ತಕ ವಿಧಾನಗಳು:**

ಸರಕಾರದ ಕಾರ್ಯಕ್ರಮವೊಂದರಲ್ಲಿ ಪ್ರಪ್ರಥಮವಾಗಿ ಪಾಲ್ಗೊಳ್ಳುವಿಕೆಯಿಂದ ಪಾರದರ್ಶಕ ಮತ್ತು ಉತ್ತರದಾಯಿತ್ವ ರೂಢಿಸಲು ಸಾಧ್ಯವೆಂಬುದು ಇದರಿಂದ ತಿಳಿದು ಬರುವಂತಾಯಿತು. ನೇರವಾಗಿ ಸಾಮಾಜಿಕ ತಪಾಸಣೆ ಮತ್ತು ಪರೀಕ್ಷೆಗೆ ಈ ಕಾರ್ಯಕ್ರಮವನ್ನು ಒಳಪಡಿಸಬಹುದಾಗಿದೆ. ಕೇವಲ ಮಾಹಿತಿ ಹಕ್ಕು ಕಾನೂನು ಮಾತ್ರವಲ್ಲ, ಈ ಕಾನೂನು ಸಹ ಇದಕ್ಕೆ ಅವಕಾಶ ಕಲ್ಪಿಸಬಲ್ಲದು ಎನ್ನುವುದು ಈಗ ಖಚಿತಪಟ್ಟಿದೆ. ಇಂತಹ ಅನೇಕ ನಿದರ್ಶನಗಳನ್ನು ಕಾಣಬಹುದಾಗಿದೆ. ಹಳ್ಳಿಗಳಲ್ಲಿ ದುರುಪಯೋಗಪಡಿಸಿಕೊಂಡ ಹಣವನ್ನು ಅಧಿಕಾರಿಗಳೇ ಹಿಂದಿರುಗಿಸುತ್ತಿದ್ದಾರೆ. ಅನೇಕ ಸಾರ್ವಜನಿಕ ಸಭೆಗಳಲ್ಲಿ ಇಂತಹ ಭ್ರಷ್ಟ ಬೆಂಗಾಲಿನವರ ವಿರುದ್ಧ ಶಾಸಕರು ಮತ್ತು ರಾಜಕಾರಣಿಗಳು ತಿರುಗಿ ಬಿದ್ದ ಉದಾಹರಣೆಗಳಿವೆ. ಆಂಧ್ರಪ್ರದೇಶದಲ್ಲಿ ಇದು ವಿಶೇಷವಾಗಿ ಕಂಡುಬರುತ್ತಿದೆ. ಏಕೆಂದರೆ ಈ ಕಾರ್ಯಕ್ರಮದ ಅನುಷ್ಠಾನದಲ್ಲಿ ಸಾರ್ವಜನಿಕ ತಪಾಸಣೆ ಒಂದು ಪ್ರಮುಖ ಅಂಶವಾಗಿದೆ.

ಸಮುದಾಯ ಮತ್ತು ಆಡಳಿತ ಯಂತ್ರದ ಸಹಭಾಗಿತ್ವ ಇದ್ದರೆ ಯಾವುದೇ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಸಾಧ್ಯ ಎನ್ನುವುದು ಈಗ ದೃಢಪಟ್ಟಿದೆ. ಅನೇಕ ರಾಜ್ಯಗಳಲ್ಲಿ ಅಧಿಕಾರಿಗಳು, ಸರಕಾರೇತರ ಸಂಸ್ಥೆಗಳು, ಗ್ರಾಮಸ್ಥರ ಗುಂಪುಗಳು ಮತ್ತು ಕೆಲಸಗಾರರು ಒಟ್ಟಾಗಿ ಕಾರ್ಯನಿರ್ವಹಿಸಿದ್ದು ಅಂತಹ ಕಾರ್ಯಕ್ರಮ ಹೆಚ್ಚು ಪರಿಣಾಮಕಾರಿಯಾಗಿರುವುದು ಮತ್ತು ಫಲಕಾರಿಯಾಗಿರುವುದು ಕಂಡುಬಂದಿದೆ. ಇದು ಬ್ರಿಟಿಷ್ ಕಾಲದ ಆಡಳಿತ ವೈಖರಿಗಿಂತ ಅಜಗಜಾಂತರ ವ್ಯತ್ಯಾಸ ಹೊಂದಿದೆ. ಅಧಿಕಾರದ ವಿಕೇಂದ್ರಿಕರಣದ ನಿಜವಾದ ಅರ್ಥವನ್ನು ಅಳವಡಿಸಿಕೊಂಡಿದೆ.

ಅನೇಕ ಜಿಲ್ಲೆಗಳಲ್ಲಿ ವಿವಿಧ ಬಗೆಯ ಕಾರ್ಯಕ್ರಮಗಳನ್ನು ಈ ರೀತಿ ಜಂಟೀ ಸಹಯೋಗದಲ್ಲಿ ಕೈಕೊಳ್ಳುವ ಬಗ್ಗೆ ನಡೆಸಿರುವ ಪ್ರಯತ್ನ ಉತ್ತೇಜಿಕವಾಗಿ ಕಂಡುಬಂದಿರುವುದು ಒಂದು ಒಳ್ಳೆಯ ಬೆಳವಣಿಗೆ ಎನ್ನಬಹುದು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಒಂದು ಉತ್ತಮ ಅವಕಾಶ ಕಲ್ಪಿಸುತ್ತದೆಯೆಂದು ಅನೇಕ ಸ್ವಯಂ ಸೇವಾ ಸಂಘಟನೆಗಳು, ಸರಕಾರೇತರ ಸಂಸ್ಥೆಗಳು ಮತ್ತು ಗ್ರಾಮೀಣ ಬಡವರು ಇದೀಗ ಮನಗಂಡಿದ್ದಾರೆ. ಹಾಗಾಗಿ ಅಭಿವೃದ್ಧಿ ಯೋಜನೆಗಳಲ್ಲಿ ಒಟ್ಟಾಗಿ ಸೇರಲು ಮತ್ತು ನಿರ್ವಹಿಸಲು ಅವರು ಮುಂದೆ ಬರುತ್ತಿದ್ದಾರೆ.

**೧) ಗ್ರಾಮೀಣ ಪ್ರದೇಶಗಳಲ್ಲಿ ಬಂಡವಾಳ ಹೂಡಿಕೆ :**

ಕೃಷಿ ಕ್ಷೇತ್ರದಲ್ಲಿ ಬಂಡವಾಳದ ನಿರ್ಮಾಣ ಈ ಕಾರ್ಯಕ್ರಮದ ಮಹತ್ವದ ಕೊಡುಗೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಯಾವ ರೀತಿಯ ಕೆಲಸಗಳನ್ನು ಕೈಕೊಳ್ಳಬಹುದು ಎನ್ನುವುದನ್ನು ಕಾನೂನೇ ತಿಳಿಸುತ್ತದೆ. ಎಲ್ಲ ಕಾರ್ಯಕ್ರಮಗಳು ಒಂದಿಲ್ಲೊಂದು ರೀತಿಯಲ್ಲಿ ಸ್ವತ್ತು ನಿರ್ಮಾಣ ಮತ್ತು ನೀರಿನ ಮಿತವ್ಯಯಕ್ಕೆ ಸಂಬಂಧಿಸಿದ್ದಾಗಿದೆ. ಹಳ್ಳಿಯ ಕಾಮಗಾರಿಯೆಂದರೆ ಪ್ರತಿವರ್ಷ

ಮಳೆ ಬಂದಾಗ ಕೊಚ್ಚಿಕೊಂಡು ಹೋಗುವ ಕಳಪೆ ರಸ್ತೆಯ ಕೆಲಸವೆನ್ನುವ ಭಾವನೆಯೊಂದಿತ್ತು. ಇದಕ್ಕೆ ಪ್ರತಿಯಾಗಿ ಮೊದಲವರ್ಷ ೭,೦೦೦ ಕೋಟಿ ರೂಪಾಯಿ ವೆಚ್ಚದಲ್ಲಿ ಕೈಕೊಳ್ಳಲಾದ ೮,೩೦,೦೦೦ ಕಾಮಗಾರಿಗಳು ೨೫% ರಷ್ಟು ಭಾಗ ಮಳೆ ಕೊಯ್ಲಿನ ವ್ಯವಸ್ಥೆ ನಿರ್ಮಾಣ, ಸಣ್ಣ ನೀರಾವರಿ ಕೆರೆಗಳ ಅಭಿವೃದ್ಧಿ, ಸಮುದಾಯದ ಬಳಕೆಗಾಗಿ ಬಾವಿ ನಿರ್ಮಾಣ, ಭೂ ಅಭಿವೃದ್ಧಿ, ಪ್ರವಾಹ ನಿಯಂತ್ರಣ, ಅರಣ್ಯ ಅಭಿವೃದ್ಧಿ ಮುಂತಾದ ಕಾರ್ಯಕ್ರಮಗಳಿಗಾಗಿ ವಿನಿಯೋಗವಾಗಿದೆ. ಇದರಿಂದಾಗಿ ಸುಮಾರು ೧೨ ಕೋಟಿ ಘನ ಮೀಟರ ನೀರು ಸಂಗ್ರಹ ಸಾಮರ್ಥ್ಯ, ೩ ಲಕ್ಷ ಕಿ.ಮೀ. ಒಳಚರಂಡಿ, ನೀರು ಸಂಗ್ರಹಿತ ಪ್ರದೇಶಗಳಲ್ಲಿ ಹರಿಗಾಲುವೆಗಳ ನಿರ್ಮಾಣ, ಸುಮಾರು ೩.೫ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ತೋಟಗಾರಿಕೆ ಬೆಳೆ ಅಭಿವೃದ್ಧಿ ಮುಂತಾದ ಪ್ರಯೋಜನಗಳು ಲಭಿಸಿವೆ. ಅಭಾವ ಪೀಡಿತ ಮತ್ತು ಅಲ್ಪಮಳೆಯ ಹಾಗೂ ಅರೆ ಮರಳುಗಾಡು ಪ್ರದೇಶಗಳಲ್ಲಿ ಬರಗಾಲ ಹಾಗೂ ಕ್ಷಾಮ ತಡೆಗಟ್ಟಲು ಇವು ನೆರವಾಗಬಲ್ಲವು.

ಮೊದಲ ವರ್ಷದಲ್ಲೇ ಮಹತ್ ಸಾಧನೆಯನ್ನು ನಾವು ನಿರೀಕ್ಷಿಸುವುದು ಅಷ್ಟು ಸೂಕ್ತವೆನಿಸಲಾರದು. ಆದರೆ ಅದೇ ಉತ್ಸಾಹ ಎರಡನೇ ವರ್ಷವೂ ಮುಂದುವರೆದಿದೆ ಎನ್ನುವುದು ಗಮನಿಸಬೇಕಾದ ಅಂಶ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಗ್ರಾಮೀಣ ಪ್ರದೇಶದಲ್ಲಿ ಸೂಕ್ತ ಬಂಡವಾಳ ಹೂಡಿಕೆಯ ಮತ್ತು ಅಭಿವೃದ್ಧಿಪರ ಕಾರ್ಯಕ್ರಮಗಳಿಗಾಗಿ ಇದೆ ಎನ್ನುವುದಕ್ಕೆ ಯಾವ ಸಂಶಯವೂ ಈಗ ಉಳಿದಿಲ್ಲ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಒಂದು ವೈಶಿಷ್ಟ್ಯವೆಂದರೆ, ಇದರಲ್ಲಿ ನಿರ್ಮಾಣಗೊಂಡ ಅನೇಕ ಸೌಲಭ್ಯಗಳು ನೇರವಾಗಿ ಬಡವರ ಬಳಕೆಗೆ ಲಭ್ಯವಾಗುವಂತಿರುವುದು. ಇದಕ್ಕೆ ಮುಖ್ಯ ಕಾರಣವೆಂದರೆ, ಈ ಕಾರ್ಯಕ್ರಮದಡಿಯಲ್ಲಿ ಕೈಕೊಳ್ಳಬೇಕಾದ ಕಾರ್ಯಗಳು ಬಡತನ ರೇಖೆಗಿಂತ ಕೆಳಗಿರುವ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಜನರಿಗೆ ಅನ್ವಯಿಸುವಂತಿರಬೇಕೆಂದು ಕಾನೂನಿನಲ್ಲಿ ಸ್ಪಷ್ಟಪಡಿಸಲಾಗಿದೆ. ಮಹಾರಾಷ್ಟ್ರದಲ್ಲಿ ಉದ್ಯೋಗ ಭರವಸೆ ಯೋಜನೆಯಡಿ ೧೯೭೦ ರಲ್ಲಿ ಕೈಕೊಳ್ಳಲಾದ ಕಾರ್ಯಕ್ರಮಗಳು ರೈತರ ಪ್ರಗತಿಗೆ ಕಾರಣವಾದಂತೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಕೈಕೊಳ್ಳಲಾಗಿರುವ ಕಾರ್ಯಕ್ರಮಗಳು ಬಡವರಿಗೆ ನೆರವಾಗಬಲ್ಲವು. ಸುಮಾರು ೧೫ ದಶಲಕ್ಷ ಹೆಕ್ಟೇರ್‌ಗಳಷ್ಟು ಪ್ರದೇಶ ಬಡವರ ಆಧೀನದಲ್ಲಿದೆ ಎನ್ನುವ ಮಾಹಿತಿ ಹಲವಾರು ಜನರಿಗೆ ಸರಿಯಾಗಿ ತಿಳಿದಿಲ್ಲ. ಇದು ತೋಟಗಾರಿಕಾ, ಕೃಷಿ, ಪ್ಲಾಂಟೇಶನ್ ಮತ್ತು ಸಂಯೋಜಿತ ಕೃಷಿ ಮುಂತಾದ ಅನೇಕ ಬಗೆಯ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸುವ ಸಮಗ್ರ ಅಭಿವೃದ್ಧಿ ಕಾರ್ಯಕ್ಕೆ ಉತ್ತಮ ಭವಿಷ್ಯ ನಿರ್ಮಾಣಮಾಡಬಲ್ಲದು. ಅನೇಕ ಕಡೆಗಳಲ್ಲಿ ಸಣ್ಣ ಪ್ರಮಾಣದಲ್ಲಿ ಇದರ ಬಗ್ಗೆ ಪ್ರಯತ್ನಿಸಲಾಗಿದೆ. ಅಂದರೆ ಇದು ವ್ಯವಸ್ಥಿತ ರೀತಿಯಲ್ಲಿ, ಸುಸಂಘಟಿತ ಕ್ರಮದಲ್ಲಿ ನಡೆದಿಲ್ಲ. ಆದರೆ ಇದಕ್ಕೆ ಸೂಕ್ತ ಕ್ರಮ ಕೈಗೊಂಡಿಲ್ಲ. ಇದು ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗೆ ಹಾಗೂ ಸಾಮಾಜಿಕ ನ್ಯಾಯ ಒದಗಿಸುವ ಕಾರ್ಯದಲ್ಲಿ ಉತ್ತಮ ಸಾಧನವಾಗಿ ಪರಿಣಮಿಸಬಲ್ಲದು. ಇದರ ಬಗ್ಗೆ ಯಾವುದೇ ಅನುಮಾನಕ್ಕೆ ಆಸ್ಪದವಿಲ್ಲ.

ಸಬಲೀಕರಣ : ಬಹುಶ ಇದೆಲ್ಲದಕ್ಕಿಂತ ಮುಖ್ಯವಾಗಿ, ಬಡವರ ಸಬಲೀಕರಣ ಪ್ರಕ್ರಿಯೆಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಸೂಕ್ತ ಅವಕಾಶವನ್ನು ಒದಗಿಸಬಲ್ಲದು ಎನ್ನುವುದು ಪರಿಗಣಿಸಬೇಕಾದ ಅಂಶ. ದೇಶದ ಅನೇಕ ಕಡೆ ಬಡ ಕುಟುಂಬಗಳು ಕನಿಷ್ಠ ಸಂಬಳ / ಕೂಲಿಗೆ ಒತ್ತಾಯಿಸುತ್ತಿದ್ದು ಇದಕ್ಕೆ ಮನಸ್ಸಿಲ್ಲದ, ಉದಾಸೀನ ಧೋರಣೆ ಅನುಸರಿಸುತ್ತಿರುವ ಆಡಳಿತ ವರ್ಗಕ್ಕೆ ಹೆಚ್ಚಿನ ಸಂಬಳಕ್ಕಾಗಿ ಮತ್ತು ನಿರುದ್ಯೋಗ ಭತ್ಯೆ ನೀಡಬೇಕೆಂದು ಆಗ್ರಹಪಡಿಸುತ್ತಿರುವುದನ್ನು ಅನೇಕ ಕಡೆ ಕಾಣಬಹುದಾಗಿದೆ.

ಬಹುಶ ದೇಶದ ಇತಿಹಾಸದಲ್ಲೇ ಮೊದಲ ಬಾರಿಗೆ ಈ ಕಾನೂನು ಬಡವರ ಸಬಲೀಕರಣದ ಬಗ್ಗೆ ಸಮಾಜದಲ್ಲಿ ಹೊಸ ಜಾಗೃತಿ ಮೂಡಿಸಿದೆ. ತಮಿಳುನಾಡು, ಛತ್ತೀಸಗಡ್, ಜಾರ್ಖಂಡ, ಮಧ್ಯಪ್ರದೇಶ, ರಾಜಸ್ಥಾನ ಮತ್ತು ಒರಿಸ್ಸಾಗಳಲ್ಲಿ ಇದು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿದೆ. ಸಭೆ, ಸಮಾರಂಭ, ಚರ್ಚೆ, ಮೆರವಣಿಗೆ, ಸಮಾಲೋಚನೆ ಮುಂತಾದ ಹಲವು ರೀತಿಯ ಕಾರ್ಯಕ್ರಮಗಳ ಮೂಲಕ ಈ ಕಾನೂನಿನ ಅನುಕೂಲಗಳ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡಿಸಲಾಗುತ್ತಿದೆ. ಉದ್ಯೋಗ ಖಾತರಿ, ವರಮಾನದ ಭರವಸೆ, ಕುಟುಂಬ ಪೋಷಣೆ, ಪೌಷ್ಟಿಕ ಆಹಾರ ಪೂರೈಕೆಗೆ ಅವಕಾಶ, ಮಕ್ಕಳನ್ನು ಕೆಲಸಕ್ಕೆ ಕಳಿಸುವ ಬದಲು ಶಾಲೆಗೆ ಕಳಿಸುವ ಅನುಕೂಲ ಮುಂತಾದ ಸೌಲಭ್ಯಗಳ ಬಗ್ಗೆ ವಿವರಿಸಲಾಗುತ್ತಿದೆ. ಉದ್ಯೋಗಕ್ಕಾಗಿ ನಗರ ಪ್ರದೇಶಗಳಿಗೆ ಅಥವಾ ಇತರ ಜಾಗಗಳಿಗೆ ವಲಸೆ ಹೋಗಬೇಕಾದ ಅನಿವಾರ್ಯತೆ ತಪ್ಪುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಖಾಸಗಿ ಲೇವಾದೇವಿಗಾರರ ಶೋಷಣೆಯಿಂದ ವಿಮೋಚನೆ ಪಡೆಯಲು ಈ ಯೋಜನೆಯು ಸಹಾಯಕವಾಗಬಲ್ಲದು, ಅಲ್ಲದೆ ಸಮಾಜದಲ್ಲಿ ಬಡವರು ದೈನ್ಯದಿಂದ ಬಾಳಬೇಕಾಗಿಲ್ಲ ಎನ್ನುವುದನ್ನು ಬಿಂಬಿಸಲು ಪ್ರಯತ್ನಿಸಲಾಗುತ್ತಿದೆ.

ಈ ಹಿಂದಿನ ಕಾರ್ಯಕ್ರಮಗಳಿಗಿಂತ ಈ ಉದ್ಯೋಗ ಭರವಸೆ ಯೋಜನೆ ಭಿನ್ನವಾಗಿದೆ. ಇದು ಅರ್ಥಪೂರ್ಣವೂ ಮತ್ತು ಗುಣಾತ್ಮಕವೂ ಆಗಿದೆ. ಈ ಹಿಂದಿನ ಯೋಜನೆಗಳು ಇಷ್ಟು ವ್ಯಾಪಕವಾಗಿರಲಿಲ್ಲ ಮತ್ತು ಇಷ್ಟೊಂದು ಅನುಕೂಲಕರ ಅಂಶಗಳನ್ನು ಅವು ಒಳಗೊಂಡಿರಲಿಲ್ಲ. ಹಾಗಾಗಿ ಅವುಗಳ ಪರಿಣಾಮವು ಅಷ್ಟಾಗಿ ಕಂಡುಬಂದಿರಲಿಲ್ಲ. ಆದರೆ ಈ ಹೊಸ ಯೋಜನೆ ಪ್ರಾರಂಭವಾದ ಎರಡೇ ವರ್ಷಗಳಲ್ಲಿ ಅದರ ಪರಿಣಾಮಗಳು ಸ್ಪಷ್ಟವಾಗಿ ಅನುಭವಕ್ಕೆ ಬರತೊಡಗಿವೆ. ಇಷ್ಟೊಂದು ಅನುಕೂಲಗಳನ್ನು ಹೊಂದಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವುದೇ ನಮ್ಮ ಮುಂದಿರುವ ಸವಾಲಾಗಿದೆ. ಇದಕ್ಕಾಗಿ ಕೆಲ ಆದ್ಯತೆಗಳನ್ನು ಗುರುತಿಸಿಕೊಳ್ಳಬೇಕಾಗಿದೆ.

**೨) ಸಾರ್ವಜನಿಕ ಪರಿಶೀಲನೆ :**

ಸರಕಾರದ ಎಲ್ಲ ಕಾರ್ಯಕ್ರಮಗಳನ್ನು ಸಾರ್ವಜನಿಕ ಪರಿಶೀಲನೆಗೆ ಒಳಪಡಿಸಬೇಕಾದದ್ದು ಅಗತ್ಯ. ಇದರಿಂದ ಕಾರ್ಯಕ್ರಮಗಳಲ್ಲಿ ಹೊಣೆಗಾರಿಕೆಯನ್ನು ನಿರ್ಧಿಷ್ಟಪಡಿಸಲು ಮತ್ತು ಪಾರದರ್ಶಕತೆ ಕಾಯ್ದುಕೊಳ್ಳಲು ಅನುಕೂಲವಾಗುತ್ತದೆ. ಇದನ್ನು

ಎಲ್ಲ ಕಡೆಗೂ ಅನುಸರಿಸಬೇಕಾದದ್ದು ಅತ್ಯವಶ್ಯಕ. ಇದುವರೆಗೆ ಒಂದೇ ಒಂದು ರಾಜ್ಯ ಆಂಧ್ರಪ್ರದೇಶ ಈ ನಿಟ್ಟಿನಲ್ಲಿ ಕಾರ್ಯಕೈಕೊಂಡಿದೆ. ಹಳ್ಳಿಗಳಲ್ಲಿ ಅಭಿವೃದ್ಧಿ ಕೆಲಸಗಳಿಗೆ ಸಂಬಂಧಿಸಿದಂತೆ ಎಲ್ಲ ವಿವರಗಳ ದಾಖಲೆ, ಇವುಗಳ ಪರಿಶೀಲನೆ, ಕೆಲಸಗಾರರು ಮತ್ತು ಸಿಬ್ಬಂದಿಯ ಹಾಜರಾತಿಯ ವಿವರ, ಗ್ರಾಮಸ್ಥರು ಕೈಕೊಂಡ ತಪಾಸಣೆ ಮುಂತಾದ ಸಮಗ್ರ ಮಾಹಿತಿಯನ್ನು ಗ್ರಾಮ ಸಭೆಯ ಮುಂದೆ ಪ್ರಸ್ತುತಪಡಿಸಲಾಗುತ್ತದೆ. ಈ ಸಂದರ್ಭದಲ್ಲಿ ಗ್ರಾಮಸ್ಥರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಜಾಗರೂಕತೆಯಿಂದ ಪರಿಶೀಲಿಸಲಾಗುತ್ತದೆ. ಇದಕ್ಕೆ ಅನುಕೂಲವಾಗುವಂತೆ ಪ್ರತಿಯೊಂದು ಹಳ್ಳಿಗಳಲ್ಲಿ ಗ್ರಾಮಸ್ಥರ ತಂಡಗಳನ್ನು ರಚಿಸಲು ಸಹ ಪ್ರೋತ್ಸಾಹ ನೀಡಲಾಗುತ್ತದೆ. ರಾಜ್ಯ ಸರ್ಕಾರ ಇಂತಹ ಕಾರ್ಯಗಳಿಗೆ ಆದ್ಯತೆ ನೀಡುವ ಬಗ್ಗೆ ಸುತ್ತೋಲೆ, ಅಧಿಸೂಚನೆಗಳನ್ನು ಸಹ ಹೊರಡಿಸಿದೆ.

ಹಳ್ಳಿಯ ಅಭಿವೃದ್ಧಿ ಕಾಮಗಾರಿಗಳಲ್ಲಿ ಸರಕಾರಿ ಸಿಬ್ಬಂದಿಯ ಜೊತೆ ಸರಕಾರೇತರ ಸಂಸ್ಥೆಗಳು, ಸಾರ್ವಜನಿಕ ಸಂಘಟನೆಗಳು, ಕೆಲಸ ಮಾಡುವ ಜನರ ಪ್ರತಿನಿಧಿಗಳು ಮತ್ತಿತರ ಸ್ಥಳೀಯ ಜನರನ್ನು ಒಳಗೊಂಡ ಸಮನ್ವಯ ಸಮಿತಿಯೊಂದನ್ನು ಪ್ರಾರಂಭದಲ್ಲಿ ರಚಿಸಲಾಗುತ್ತದೆ. ಇದು ಜನರ ಪಾಲ್ಗೊಳ್ಳುವಿಕೆಗೆ ಅವಕಾಶವನ್ನು ಒದಗಿಸುತ್ತದೆ. ಇದರಿಂದ ನಿಗದಿತ ಅವಧಿಯಲ್ಲಿ ಉತ್ತಮ ಗುಣಮಟ್ಟದ ಕೆಲಸಗಳನ್ನು ನಿರ್ವಹಿಸಲು ಸಾಧ್ಯವಾಗುತ್ತದೆ.

ಉಳಿದ ರಾಜ್ಯಗಳು ಈ ಮಾರ್ಗವನ್ನು ಅನುಸರಿಸಬೇಕು. ಹಾಗಿಲ್ಲದಿದ್ದಲ್ಲಿ ರಾಜಸ್ಥಾನ ಮತ್ತಿತರ ಕಡೆಗಳಲ್ಲಿ ನಡೆದಿರುವಂತೆ ಅಭಿವೃದ್ಧಿ ಕಾಮಗಾರಿಗಳನ್ನು ಸಾರ್ವಜನಿಕ ತಪಾಸಣೆಗೆ ಒಳಪಡಿಸುವ ಕಾರ್ಯಕ್ಕೆ ತೀವ್ರ ವಿರೋಧ ವ್ಯಕ್ತವಾಗಬಹುದು. ಮತ್ತು ಅಡಚಣೆಯು ಉಂಟಾಗಬಹುದು. ಆಂಧ್ರಪ್ರದೇಶದಲ್ಲೂ ಮೊದಮೊದಲು ಇಂತಹ ಪ್ರತಿಕ್ರಿಯೆ ಕಂಡುಬಂದಿತು. ಅನೇಕ ಸಂದರ್ಭಗಳಲ್ಲಿ ಆಡಳಿತದ ಹುಳುಕು ಹೊರಬಿದ್ದಿತು. ಆದರೆ ಸರಕಾರದ ದೃಢ ನಿಲುವಿನಿಂದಾಗಿ ಅಧಿಕಾರಿಗಳು ಇದನ್ನು ತಡೆಗಟ್ಟಲು ಸಾಧ್ಯವಾಗಲಿಲ್ಲ. ಇದಕ್ಕೆ ಪ್ರತಿಯಾಗಿ ಈ ಅನುಭವ ಸಾರ್ವಜನಿಕರ ಮೆಚ್ಚುಗೆಗೂ ಪಾತ್ರವಾಯಿತು ಮತ್ತು ಕ್ರಮೇಣ ಅಧಿಕಾರ ವರ್ಗವು ಇದಕ್ಕೆ ಸ್ಪಂದಿಸಲು ಪ್ರಾರಂಭಿಸಿತು. ವಾಸ್ತವವಾಗಿ ಇಂತಹ ದೃಷ್ಟಾಂತಗಳಿಂದಾಗಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಅನೇಕ ಕಾರ್ಯಕ್ರಮಗಳಿಗೆ ಪರಿಣಿತರನ್ನು ತೆಗೆದುಕೊಳ್ಳುವ ಪ್ರಯತ್ನ ಇತ್ತೀಚಿಗೆ ನಡೆದಿದೆ.

ಆದರೆ ಇಂತಹ ಪ್ರಯತ್ನ ನಡೆದಿದ್ದು ಆಂಧ್ರಪ್ರದೇಶದಲ್ಲಿ ಮಾತ್ರ. ಮತ್ತೆ ಯಾವ ರಾಜ್ಯವು ಕಾರ್ಯಕ್ರಮದಲ್ಲಿ ಸಾರ್ವಜನಿಕ ಪರಿಶೀಲನೆಗೆ ಅವಕಾಶ ನೀಡುವ ಬಗ್ಗೆ ಧೈರ್ಯ ತೋರಿಸಲಿಲ್ಲ. ರಾಜ್ಯ ಸರಕಾರಗಳು ಈ ಕೆಲಸಕ್ಕೆ ಮುಂದಾಗಬಹುದೆಂದು ನಿರೀಕ್ಷಿಸುವಂತೆಯೂ ಇಲ್ಲ. ಕೇಂದ್ರ ಸರಕಾರದಿಂದಲೆ ಇದರ ಬಗ್ಗೆ ನಿರ್ದೇಶನ ಹೊರಡಿಸಬೇಕಾಗಬಹುದು. ಇದಲ್ಲದೆ ಕೇಂದ್ರದಿಂದ ಹಣ ಬಿಡುಗಡೆ ಮಾಡುವ ಸಂದರ್ಭದಲ್ಲಿ ಸಾರ್ವಜನಿಕ ತಪಾಸಣೆ ಬಗೆಗೆ ಕೇಂದ್ರ ಸರಕಾರ ಒತ್ತಾಯಿಸಬಹುದಾಗಿದೆ. ಈ ರೀತಿಯ ಕ್ರಮ ಹೊಸದೇನಲ್ಲ. ಈ ಹಿಂದೆಯೂ

ಇಂತಹ ನಿದರ್ಶನಗಳಿವೆ. ಯೋಜನೆಯ ಮೊಬಲಗು ಅಧಿಕವಾದಷ್ಟು ಇಂತಹ ಪರಿಶೀಲನೆ ಹೆಚ್ಚು ಮಹತ್ವದ್ದಾಗುತ್ತದೆ.

ಈ ಸಂಬಂಧ ಕೇವಲ ನಿರ್ದೇಶನಗಳನ್ನು ನೀಡಿದ ಮಾತ್ರಕ್ಕೆ ಸರಕಾರದ ಹೊಣೆಗಾರಿಕೆ ಮುಗಿಯುವುದಿಲ್ಲ. ಗ್ರಾಮ ಪಂಚಾಯತ ಅಥವಾ ತಾಲೂಕು ಮಟ್ಟದಲ್ಲಿ ನಿರ್ಧಿಷ್ಟ ಅಭಿವೃದ್ಧಿ ಕಾರ್ಯಕ್ಕೆ ಎಲ್ಲ ಅಂಶಗಳನ್ನೊಳಗೊಂಡ ನಿರ್ಧಿಷ್ಟ ಪ್ಯಾಕೇಜ್ ಸಿದ್ಧಪಡಿಸಬೇಕು. ಕಾಮಗಾರಿಯ ವಿವಿಧ ಹಂತಗಳಲ್ಲಿ ಪಾಲ್ಗೊಳ್ಳುವ ಸಂಘಟನೆಗಳು, ಕೆಲಸದ ಪರಿಶೀಲನೆ, ಗುಣಮಟ್ಟ ತಪಾಸಣೆ, ಕೆಲಸದ ಅವಧಿ ಮುಂತಾದ ಎಲ್ಲ ವಿವರಗಳನ್ನು ಪ್ರಾರಂಭದಲ್ಲೇ ಈ ಪ್ಯಾಕೇಜ್‌ನಲ್ಲಿ ಸ್ಪಷ್ಟವಾಗಿ ಅಳವಡಿಸಬೇಕು. ಇದಕ್ಕೆ ಲಭ್ಯವಿರುವ ಸಂಪನ್ಮೂಲದ ಪ್ರಮಾಣ, ಅಗತ್ಯಕ್ಕೆ ತಕ್ಕಂತೆ ಅನುಸರಿಸಬಹುದಾದ ಕೆಲ ಬದಲಾವಣೆಗಳು, ಕಾರ್ಯಾವಧಿ ಮುಂತಾದ ಅಂಶಗಳ ಬಗೆಗೂ ಪೂರ್ವಭಾವಿಯಾಗಿಯೇ ಯೋಜಿಸಬೇಕಾದದ್ದು ಅಗತ್ಯ.

**೩) ಯೋಜನೆ ಮತ್ತು ಸಮನ್ವಯ :**

ಕೃಷಿ ವಲಯದ ಬೆಳವಣಿಗೆಯಲ್ಲಿನ ಮಂದಗತಿ (ಕೇವಲ ೨.೬%) ಬಗ್ಗೆ ತೀವ್ರ ಆತಂಕ ವ್ಯಕ್ತವಾಗಿದೆ. ಈ ಸಮಸ್ಯೆಯನ್ನು ನಿಭಾಯಿಸಲು ಗ್ರಾಮೀಣ ಪ್ರದೇಶಗಳಿಗೆ ಹೆಚ್ಚಿನ ಬಂಡವಾಳ ಹೂಡಿಕೆಯ ಬಗ್ಗೆ ಯೋಜಿಸಲಾಗುತ್ತಿದೆ. ೨೦೦೮-೦೯ ರ ಸಾಲಿನ ಆರ್ಥಿಕ ಸಮೀಕ್ಷೆ ಮತ್ತು ಮುಂಗಡಪತ್ರ ಎರಡರಲ್ಲೂ ಈ ಅಂಶಕ್ಕೆ ಮಹತ್ವ ನೀಡಲಾಗಿದೆ. ಈ ನಿಟ್ಟಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಮಹತ್ವದ ಪಾತ್ರ ನಿರ್ವಹಿಸಬಲ್ಲದು ಎಂಬುದು ಈಗಾಗಲೇ ಕೈಕೊಂಡ ಕಾರ್ಯಗಳ ಅನುಭವ ಈ ಮಾತನ್ನು ದೃಢೀಕರಿಸಿದೆ.

ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಸೂಚನೆ, ಮಾರ್ಗದರ್ಶನ, ಸೂತ್ರಗಳಿರುವದೇನೋ ಸರಿ. ಆದರೆ ಇದಕ್ಕೆ ಸಾಕಷ್ಟು ಬೆಂಬಲ, ಸೂಕ್ತ ಪರಿಕರಗಳು ಲಭ್ಯವಿಲ್ಲದಿದ್ದರೆ ನಿರೀಕ್ಷಿತ ಪ್ರತಿಫಲ ಸಾಧಿಸಲು ಸಾಧ್ಯವಾಗುವುದಿಲ್ಲ.

ಒಟ್ಟು ಆಂತ್ರಿಕ ಉತ್ಪಾದನೆಯಲ್ಲಿ ಗ್ರಾಮೀಣ ಪ್ರದೇಶಗಳ ಕೊಡುಗೆಯ ಪ್ರಮಾಣವನ್ನು ಹೆಚ್ಚಿಸಬೇಕಾದರೆ, ಗ್ರಾಮ, ತಾಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಬಲವಾದ, ಪರಿಣಾಮಕಾರಿಯಾದ ವ್ಯವಸ್ಥೆಯನ್ನು ರೂಢಿಸಿಕೊಳ್ಳಬೇಕಾದದ್ದು ಅತ್ಯವಶ್ಯಕ. ಆದರೆ ಇಂತಹ ಪ್ರಯತ್ನ ನಿಜವಾದ ಅರ್ಥದಲ್ಲಿ ಇದುವರೆಗೆ ನಡೆಯದೇ ಇರುವುದು ವಿಷಾದದ ಸಂಗತಿಯಾಗಿದೆ. ೫೦ ರ ದಶಕದಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಕೈಬಿಟ್ಟ ನಂತರವಂತೂ ಇಂತಹ ಪ್ರಯತ್ನವೇ ನಡೆದಿಲ್ಲ. ಆದರೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ ನಿಜಕ್ಕೂ ಜಿಲ್ಲೆಗಳಲ್ಲಿ ನೀರು ಪೂರೈಕೆಯಿಂದ ಹಿಡಿದು ಕುಶಲಕರ್ಮಿಗಳಿಗೆ ಅಗತ್ಯ ಸೌಲಭ್ಯಗಳನ್ನು ಒದಗಿಸುವ ತನಕ ಅಥವಾ ನೀರು ಪೂರೈಕೆಯಿಂದ ಹಿಡಿದು ಚರಂಡಿ ಸೌಕರ್ಯಗಳನ್ನು ಒದಗಿಸುವ ತನಕ ಜನಗಳ ಅಗತ್ಯತೆಗಳಿಗೆ ಸ್ಪಂದಿಸಬಲ್ಲದು. ಆದ್ದರಿಂದ ಇತರ ಕಾರ್ಯಕ್ರಮಗಳೊಂದಿಗೆ ಇದನ್ನು ಸಮನ್ವಯಗೊಳಿಸಿದರೆ ಇನ್ನೂ ಸಮಗ್ರ ರೂಪವನ್ನು

ಇದಕ್ಕೆ ಕೊಡಲು ಸಾಧ್ಯ. ಇದನ್ನು ಆಗಾಗ್ಗೆ ಕೈಗಾರಿಕೆಗಳಲ್ಲಿ ಕಾಣಬಹುದಾಗಿದೆ. ಮಾಹಿತಿ ತಂತ್ರಜ್ಞಾನವನ್ನು ಸೂಕ್ತ ರೀತಿಯಲ್ಲಿ ಉತ್ಪಾದನೆ ಮತ್ತು ಮಾರುಕಟ್ಟೆ ಮುಂತಾದ ಕ್ಷೇತ್ರಗಳಲ್ಲಿ ಬಳಸುವುದು ಇದಕ್ಕೆ ಒಂದು ಉದಾಹರಣೆ.

ಬ್ರಿಟೀಷ ಆಡಳಿತವಿದ್ದಾಗ ಕಂದಾಯ ಆಡಳಿತದಲ್ಲಿ ಇಂತಹ ಕಟ್ಟುನಿಟ್ಟಾದ ಕ್ರಮವೊಂದನ್ನು ಅಳವಡಿಸಲಾಗಿತ್ತು. ಪ್ರತಿ ಜಮಿನಿಗೆ ನೀರಾವರಿ ಸೌಕರ್ಯದ ಲಭ್ಯತೆ, ಜಮೀನಿನಲ್ಲಿರುವ ಪ್ರತಿಯೊಂದು ತಾಳೆಮರದ ಲೆಕ್ಕ, ಮಳೆಯ ಪ್ರಮಾಣ, ಜನನ-ಮರಣದ ದಾಖಲೆ ಮುಂತಾದ ಮಾಹಿತಿಯನ್ನು ವಿವರವಾಗಿ ನಿರ್ದಾಕ್ಷಿಣ್ಯವಾಗಿ ದಾಖಲಿಸಲಾಗುತ್ತಿತ್ತು. ವಾರ್ಷಿಕ ಜಮಾ ಬಂದ್ ಸಮಯದಲ್ಲಿ ಈ ಎಲ್ಲ ಮಾಹಿತಿಗಳ ಪರಿಶೀಲನೆ ನಡೆಸಲಾಗುತ್ತಿತ್ತು. ಕಂದಾಯ ಸಂಗ್ರಹಣೆಯಲ್ಲಿ ಇವುಗಳ ವಿವರಗಳಿಂದ ಅಧಿಕಾರಿಗಳಿಗೆ ಸರಿಯಾದ ಮಾಹಿತಿ ಲಭ್ಯವಾಗುತ್ತಿತ್ತು.

ಗ್ರಾಮೀಣ ಅಭಿವೃದ್ಧಿಗಾಗಿ ಇಂತಹ ಕ್ರಮವನ್ನು ರೂಢಿಸಿಕೊಳ್ಳಬೇಕಾದದ್ದು ಇಂದು ಅನಿವಾರ್ಯವಾಗಿದೆ. ಇದಕ್ಕಾಗಿ ವಿವರಗಳನ್ನೊಳಗೊಂಡ ಸಮಗ್ರ ವಿಧಾನವನ್ನು ರೂಪಿಸುವ ಕಾಲ ಸನ್ನಿಹಿತವಾಗಿದೆ. ಎಲ್ಲಕ್ಕಿಂತ ಇಂತಹ ಅಭಿವೃದ್ಧಿ ಕಾರ್ಯಗಳ ಅನುಷ್ಠಾನ ಮತ್ತು ಕಾಲಕಾಲಕ್ಕೆ ಇವುಗಳ ಪ್ರಗತಿಯ ಪರಿಶೀಲನೆಗಾಗಿ ಸಮಗ್ರ ಸಮನ್ವಯ ವ್ಯವಸ್ಥೆ ರೂಪಿಸುವುದಷ್ಟೇ ಅಲ್ಲ ಅದನ್ನು ಪ್ರವಾಹ, ಅಭಾವ ಪರಿಸ್ಥಿತಿಯಂತಹ ನೈಸರ್ಗಿಕ ವಿಕೋಪದಂತಹ ಸಂದರ್ಭಗಳಲ್ಲಿ ಪರಿಹಾರ ಕಾರ್ಯಕ್ಕೂ ಬಳಸಿಕೊಳ್ಳುವಂತಾಗಬೇಕು. ಗ್ರಾಮ ಪಂಚಾಯತ ಮಟ್ಟದಿಂದ ಜಿಲ್ಲಾಡಳಿತ ಮಟ್ಟದವರೆಗೂ ಆಡಳಿತ ಯಂತ್ರಕ್ಕೆ ಈ ವ್ಯವಸ್ಥೆಯ ಬಗ್ಗೆ ತಿಳಿದಿರಬೇಕಷ್ಟೆ ಅಲ್ಲ ಅದು ಇದರಲ್ಲಿ ಪಾಲ್ಗೊಳ್ಳಬೇಕು. ತುರ್ತು ಸಂದರ್ಭಗಳಲ್ಲಿ ನಿಭಾಯಿಸಬೇಕಾದ ಕ್ರಮಗಳು ಸಾಧಾರಣ ಕಾಲಕ್ಕಿಂತ ಭಿನ್ನವಾಗಿರುತ್ತವೆ. ಆದ್ದರಿಂದ ಅಗತ್ಯಕ್ಕೆ ತಕ್ಕಂತೆ ಇದರಲ್ಲಿ ಮಾರ್ಪಾಟು ಅನಿವಾರ್ಯ. ಇದಲ್ಲದೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮ ಕೃಷಿ, ನೀರಾವರಿ, ತೋಟಗಾರಿಕೆ, ಪಶು ಸಂಗೋಪಣೆ, ಮೀನುಗಾರಿಕೆ, ಅರಣ್ಯಾಭಿವೃದ್ಧಿ, ನೇಕಾರಿಕೆ ಮುಂತಾದ ವಿವಿಧ ಕ್ಷೇತ್ರಗಳಿಗೂ ಅನ್ವಯಿಸುವಂತಿರಬೇಕು. ಇದರಿಂದ ಬಡವರಿಗೆ ಉದ್ಯೋಗ ದೊರಕಿಸಲು ಮತ್ತು ನಿರೀಕ್ಷಿತ ಪ್ರಗತಿ ಸಾಧಿಸಲು ಅನುವಾಗಬಲ್ಲದು.

**೪) ಸಾಧನಗಳ ಬಲವರ್ಧನೆ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಪೂರ್ಣ ಬಳಕೆಯಾಗಬೇಕಾದರೆ ಅದರ ಅನುಷ್ಠಾನ ಸಮರ್ಪಕವಾಗಿರಬೇಕು. ವಿಶೇಷವಾಗಿ ಗ್ರಾಮ ಪಂಚಾಯತ ಮತ್ತು ತಾಲೂಕು ಮಟ್ಟದಲ್ಲಿ ಇದಕ್ಕಾಗಿ ಸಿ.ಎ.ಜಿ. ವಿಶೇಷ ಗಮನ ಪರಿಹರಿಸಬೇಕಾದದ್ದು ಅವಶ್ಯಕ. ವರದಿಯಲ್ಲಿ ಈ ಅಂಶಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಇದಕ್ಕೂ ಮುಂದೆ ಕೈಕೊಂಡಿದ್ದ ವಿವಿಧ ಉದ್ಯೋಗ ಯೋಜನೆಗಳ ವಿಶ್ಲೇಷಣೆಯಿಂದಲೂ ಈ ಅಂಶ ಸ್ಪಷ್ಟವಾಗಿದೆ. ಸಧ್ಯಕ್ಕೆ ಈ ಯೋಜನೆಯಲ್ಲಿ ೪% ಮೊತ್ತವನ್ನು (ಇತ್ತೀಚಿಗೆ ಇದನ್ನು ೬%

ರಿಂದ ೪% ಕ್ಕೆ ಹೆಚ್ಚಿಸಲಾಗಿದೆ) ಆಡಳಿತ ನಿರ್ವಹಣೆಗಾಗಿ ವಿನಿಯೋಗಿಸಬಹುದಾಗಿದೆ. ಕಾಮಗಾರಿಯ ಸ್ಥಳದಲ್ಲಿ ಕೆಲ ಅಗತ್ಯಗಳನ್ನು ಪೂರೈಸಲು ಮತ್ತು ಸಾರ್ವಜನಿಕರ ಪರಿಶೀಲನೆಯ ಸಂದರ್ಭದಲ್ಲೂ ಈ ಹಣ ಉಪಯೋಗಕ್ಕೆ ಬರುತ್ತದೆ. ಇದು ಪೂರ್ಣವಾಗಿ ಸಾಲುವದಿಲ್ಲ ಆದರೂ ಸಧ್ಯದ ಮಟ್ಟಿಗೆ ಇಷ್ಟು ಸಾಕು. ಗ್ರಾಮ ಪಂಚಾಯತ, ತಾಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಈ ಅಗತ್ಯದ ಪ್ರಮಾಣ ಬೇರೆ ಬೇರೆಯಾಗಿರುವದರಿಂದ ಇದರ ಬಗ್ಗೆ ಮುಂಚಿತವಾಗಿಯೇ ಅಂದಾಜು ಮಾಡಬೇಕಾಗಬಹುದು. ಆದರೆ ಇದು ಡಿ.ಆರ್.ಡಿ.ಎ. ಗಿಂತ ಭಿನ್ನ ಎನ್ನುವ ಅಂಶವನ್ನು ಗಮನದಲ್ಲಿಟ್ಟುಕೊಂಡಿರಬೇಕಾಗುತ್ತದೆ. ಈ ಕಾರ್ಯಕ್ರಮಗಳ ನಿರ್ವಹಣೆಯ ಬಗ್ಗೆ ಮುಂಚಿತವಾಗಿ ಯೋಚಿಸದೆ ಅವು ನಿರೀಕ್ಷಿತ ಫಲ ನೀಡದಿದ್ದರೆ ನಿಜಕ್ಕೂ ನಮ್ಮ ಯೋಜನಾ ಕ್ರಮದಲ್ಲೇ ದೋಷವಿರುವುದನ್ನು ಒಪ್ಪಿಕೊಳ್ಳದೆ ವಿಧಿಯಿಲ್ಲ.

ಈ ಯೋಜನೆಗೆ ಸಂಬಂಧಿಸಿದಂತೆ ಪೂರ್ವಸಿದ್ಧತೆ ಮತ್ತು ಸೂಕ್ತ ತರಬೇತಿ ಮಹತ್ವದ ಅಂಶ. ಏಕೆಂದರೆ ಇದು ಸಂಕೀರ್ಣವಾದ ಕೆಲಸ. ಇದಕ್ಕೆ ಹಲವು ಆಯಾಮಗಳಿರುವದರಿಂದ ಪ್ರತಿಯೊಂದು ನಿಟ್ಟಿನಲ್ಲಿಯೂ ಸಮರ್ಪಕ ನಿರ್ವಹಣೆಗೆ ಎಲ್ಲ ಗುಂಪುಗಳ ನಡುವೆ ಹೊಂದಾಣಿಕೆ ಮತ್ತು ಸಮನ್ವಯ ದೃಷ್ಟಿ ಹೊಂದಿರುವುದು ಅಗತ್ಯವಾಗುತ್ತದೆ. ಇದು ಈ ಮುಂದಿನ ಅನುಭವಕ್ಕಿಂತ ಭಿನ್ನವಾಗಿರಲು ಸಾಧ್ಯ. ಇದಕ್ಕಾಗಿ ಸಮರ್ಪಕ ತರಬೇತಿ ವಿಧಾನ ಮತ್ತು ಪ್ರಾತ್ಯಕ್ಷಿಕೆಗಳನ್ನು ರೂಪಿಸಬೇಕಾದಿತು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಒಂದು ಸಂಕೀರ್ಣ ಕಾರ್ಯಕ್ರಮ. ಇದರ ಗಾತ್ರವೂ ತುಂಬಾ ವಿಸ್ತಾರವಾದುದು. ಈಗ ಇದನ್ನು ೩೩೦ ಜಿಲ್ಲೆಗಳಿಂದ ದೇಶದ ಎಲ್ಲ ಜಿಲ್ಲೆಗಳಿಗೂ ವಿಸ್ತರಿಸಲಾಗುತ್ತಿದೆ. ಅಂದರೆ ಇಮ್ಮಡಿ ಪ್ರಮಾಣದಲ್ಲಿ ಹೆಚ್ಚಾಗಿದೆ. ಇದಕ್ಕೆ ತಕ್ಕ ಹಾಗೆ ವ್ಯಾಪಕ ಮತ್ತು ಸೃಜನಾತ್ಮಕ ಸಿದ್ಧತಾ ಕಾರ್ಯ ಕೈಕೊಳ್ಳಬೇಕಾಗುತ್ತದೆ. ಕೇವಲ ಸರಕಾರಿ ಅಥವಾ ಅರೇ ಸರಕಾರಿ ವ್ಯವಸ್ಥೆಯಿಂದ ಮಾತ್ರ ಇದರ ನಿರ್ವಹಣೆ ಅಸಾಧ್ಯ. ಇದಕ್ಕಾಗಿ ಸರಕಾರದೊಂದಿಗೆ ಅನುಭವ ಇರುವ ಇತರ ಸಂಘಟನೆಗಳು ಮತ್ತು ತಜ್ಞರು ಕೈಜೋಡಿಸಬೇಕು. ವಿವಿಧ ಕ್ಷೇತ್ರಗಳಲ್ಲಿ ನುರಿತ, ಪರಿಣಿತ ತಂಡಗಳನ್ನು ಅಥವಾ ಅವುಗಳ ಪ್ರತಿನಿಧಿಗಳನ್ನು ಸೇರಿಸಿಕೊಂಡು ಸಮಾಲೋಚನೆ ನಡೆಸಬೇಕು.

ಕೊನೆಯದಾಗಿ ಈ ಉದ್ಯೋಗ ಭರವಸೆ ಕಾರ್ಯಕ್ರಮಕ್ಕೆ ಅನಗತ್ಯ ಹೆಗ್ಗಳಿಕೆಯನ್ನಾಗಲಿ, ಪ್ರಚಾರವನ್ನಾಗಲಿ ನೀಡಬೇಕಾಗಿಲ್ಲ, ಬಡತನದ ಮುದ್ರೆಯನ್ನು ಇದಕ್ಕೆ ಒತ್ತಬೇಕಾಗಿಲ್ಲ. ಇದಕ್ಕೆ ಬೇಕಾದುದು ನಂಬಿಕೆ, ಅಚಲ ವಿಶ್ವಾಸ, ಕಾರ್ಯ ಯೋಜನೆಯ ಅನುಷ್ಠಾನದಲ್ಲಿ ಪ್ರಶ್ನಾತೀತ ಶ್ರದ್ಧೆ ಇದೇ ಇದರ ತಿರುಳು. ಹಾಗಿಲ್ಲದಿದ್ದಲ್ಲಿ ಇದನ್ನು ತನ್ನದೆಂದು ಸಾರಿಕೊಳ್ಳುವ ಪ್ರಚಾರದ ಭರಾಟೆಯಲ್ಲಿ ಇದರ ಮೂಲ ಉದ್ದೇಶವೇ ಮರೆಯಾಗಿ ಬಿಡಬಹುದಾದ ಅಪಾಯವಿದೆ. ಇದನ್ನು ಕೇವಲ ಗ್ರಾಮೀಣಾಭಿವೃದ್ಧಿ ಸಚಿವಾಲಯದ ಕಾರ್ಯಕ್ರಮ ಎಂದು ಪರಿಗಣಿಸಿ ಸೀಮಿತಗೊಳಿಸದೆ ಒಂದು ರಾಷ್ಟ್ರೀಯ ಕಾರ್ಯಕ್ರಮವಾಗಿ

ಪರಿಗಣಿಸಬೇಕು. "ಹಸಿರುಕ್ರಾಂತಿ" ಯಂತಹ ಕಾರ್ಯಕ್ರಮವಾಗಿ ಇದು ರೂಪಿತಗೊಂಡಾಗ ಮಾತ್ರ ಇದು ನಿರೀಕ್ಷಿತ ಅಥವಾ ಅದಕ್ಕೂ ಹೆಚ್ಚಿನ ಫಲ ನೀಡಲು ಸಾಧ್ಯವಾದೀತು.

**೨.೫ ಬಡತನ ನಿರ್ಮೂಲನೆ ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಗುರಿ ಹಾಗೂ ಸಾಧನೆ :**

"ಈ ದೇಶದ ಕಡುಬಡವರು ಹಸಿವಿನ ಯಾತನೆ ಮತ್ತು ನರಳುವಿಕೆಯಿಂದ ಮುಕ್ತರಾದಾಗ ಮಾತ್ರ ಭಾರತ ನಿಜವಾದ ಸ್ವಾತಂತ್ರ್ಯವನ್ನು ಹೊಂದುತ್ತದೆ." ಎಂದು ಮಹಾತ್ಮಾ ಗಾಂಧೀಜಿಯವರು ಹೇಳಿದ ಮಾತಿನಂತೆ ಸಾಧಿಸಬೇಕಿದ್ದರೆ ನಿರುದ್ಯೋಗದ ಪ್ರಮಾಣವನ್ನು ಕಡಿಮೆ ಮಾಡಬೇಕು. ಅಂದರೆ ದುಡಿಯಲು ಶಕ್ತಿ ಇರುವ ಜನರಿಗೆ ದುಡಿದು ಸಂಪಾದಿಸಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು.

**ಬಡತನ ರಾಷ್ಟ್ರೀಯ ಮಾನದಂಡಗಳು**

ಒಂದು ಕುಟುಂಬದ ವಾರ್ಷಿಕ ಆದಾಯ ರೂ. ೧೯,೨೬೧/- ಕ್ಕಿಂತ ಕಡಿಮೆ ಇದ್ದರೆ ಅವರನ್ನು ಬಡತನ ರೇಖೆಗಿಂತ (ಬಿ.ಪಿ.ಎಲ್) ಕೆಳಗೆ ಇರುವವರು ಎಂದು ಗುರುತಿಸಲಾಗಿದೆ. ಓರ್ವ ವ್ಯಕ್ತಿ ಪ್ರತಿದಿನ ಗ್ರಾಮಾಂತರ ಪ್ರದೇಶದವರಿಗೆ ೨೪೦೦ ಕ್ಯಾಲರಿ ಹಾಗೂ ನಗರ ಪ್ರದೇಶದ ಜನರಿಗೆ ೨೧೦೦ ಕ್ಯಾಲರಿ (೫೦೦ ರಿಂದ ೬೦೦ ಗ್ರಾಂ. ಧಾನ್ಯ) ಪ್ರಮಾಣದ ಪೌಷ್ಟಿಕ ಆಹಾರ ಪಡೆಯಲು ಸಾಧ್ಯವಾಗದಿದ್ದರೆ, ಅಂತಹವರನ್ನು ಬಡತನ ರೇಖೆಗಿಂತ ಕೆಳಗೆ ಇರುವವರು ಎಂದು ಪರಿಗಣಿಸಲಾಗುತ್ತಿದೆ.

**ಬಡತನಕ್ಕೆ ಕಾರಣಗಳು :**

ಬಡತನದ ಕಾರಣಗಳನ್ನು ಹೇಳುವಾಗಲೂ ಬೇರೆ ಬೇರೆ ಮನೋಭಾವಗಳನ್ನು ಕಾಣುತ್ತೇವೆ. ಸೋಮಾರಿತನ, ದುಶ್ಚಟಗಳು, ಹೆಚ್ಚು ಮಕ್ಕಳನ್ನು ಹೊಂದಿರುವುದು, ಉಳಿತಾಯ ಮಾಡದೇ ಇರುವುದು, ಭವಿಷ್ಯದ ಕುರಿತು ಯೋಚನೆ ಮಾಡದಿರುವುದು ಬಡತನಕ್ಕೆ ಕಾರಣವೆಂದು ಒಂದು ವಾದವಾದರೆ, "ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತಿದ್ದಾರೆ. ಇದು ಅವರ ಕರ್ಮಫಲ" ಎನ್ನುವ ವಾದವೂ ಇನ್ನೊಂದೆಡೆ ಇದೆ. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಅಸಮಾನತೆ, ಸಂಪತ್ತು, ಸೌಲಭ್ಯಗಳು ಮತ್ತು ಅವಕಾಶಗಳ ಅಸಮಾನ ಹಂಚಿಕೆ ಇವೂ ಕೂಡ ಬಡತನಕ್ಕೆ ಕಾರಣಗಳಾಗಿವೆ.

ಭೂಮಿ ಇಲ್ಲದಿರುವುದು, ಕಡಿಮೆ ಭೂಮಿ ಇರುವುದು, ಇರುವ ಭೂಮಿಯಲ್ಲಿ ಕಡಿಮೆ ಉತ್ಪಾದಿಸುತ್ತಿರುವುದರಿಂದ ಆದಾಯ ಕಡಿಮೆಯಾಗುತ್ತಿರುವುದು, ಸಾಕಷ್ಟು ಪೌಷ್ಟಿಕ ಆಹಾರ ಸೇವಿಸದೆ ಆರೋಗ್ಯ ಸ್ಥಿತಿ ಕಡಿಮೆ ಇರುವುದು, ಮಾನಸಿಕ ಸ್ಥಿತಿ ಸರಿಯಿಲ್ಲದಿರುವುದು, ಹುಟ್ಟಿದಾಗಿನಿಂದ ಸಾಯುವವರೆಗೆ ಬಡತನದಲ್ಲಿ ನರಳುವುದು ಹಾಗೂ ಇನ್ನು ಮುಂತಾದ ಕಾರಣಗಳಿಂದ ಬಡತನ ಜೀವಂತವಾಗಿದೆ. ಶಿಕ್ಷಣ ಪಡೆಯದೆ ಇರುವುದರಿಂದ ಕೌಶಲ್ಯ ಕಡಿಮೆ ಇರುವುದು, ದುಡಿಯುವ ಕೈಗಳಿಗೆ ಉದ್ಯೋಗ ಇಲ್ಲದೇ ಇರುವುದು, ದುಡಿಯುವರಿಗೆ ಕಡಿಮೆ ವೇತನ ನೀಡುವುದು ಮತ್ತು ಜನಗಳ ನಡುವೆ ಸಂಪರ್ಕದ ಕೊರತೆ ಇರುವುದು ಕೂಡ ಬಡತನಕ್ಕೆ ಕಾರಣಗಳಿವೆ.

**೧. ಬಡತನ ನಿವಾರಣೆ ಮತ್ತು ಅಭಿವೃದಿ**

ದೇಶದಲ್ಲಿ ಬಡವರು ಇರುವ ತನಕ ಬಡತನ ಹೋಗುವುದಿಲ್ಲ. ದೇಶದಲ್ಲಿ ಬಡಜನರು ಇರುವ ತನಕ ಶ್ರೀಮಂತರು ಮುಂದುವರೆಯುತ್ತಾರೆ. ಮೊದಲು ಹಸಿದ ಹೊಟ್ಟೆಗೆ ಅನ್ನ ನೀಡಿ ನಂತರ ಉಳಿದವುಗಳ ಬಗ್ಗೆ ತಿಳಿಸಬೇಕಾಗಿದೆ. ಒಟ್ಟಾರೆ ಮಾನವಾಭಿವೃದಿ ಆಗಬೇಕಾದರೆ ಜನರ ಆಯ್ಕೆಗಳನ್ನು ವಿಶಾಲಗೊಳಿಸಬೇಕಿದೆ. ಅಂದರೆ ಸಮಾಜದ ಅಭಿವೃದಿ ದೃಷ್ಟಿಯಿಂದ ಜನರು ಆರ್ಥಿಕವಾಗಿ ಸದೃಢರಾಗಬೇಕು. ದೇಶದಲ್ಲಿ ಬಡತನ ಸಂಪೂರ್ಣವಾಗಿ ನಿರ್ಮೂಲನೆ ಆಗಬೇಕು. ಒಟ್ಟಾರೆ ಜನರ ಜೀವನ ಮಟ್ಟ ಸುಧಾರಣೆಯಾಗಬೇಕಾಗಿದೆ.

ಬಡತನ ನಿವಾರಣೆ ಮಾಡುವ ನಿಟ್ಟಿನಲ್ಲಿ ಮೊದಲಿಗೆ ನಿರುದ್ಯೋಗ ನಿವಾರಣೆ ಆಗಬೇಕು. ದುಡಿದು ಗಳಿಸಲೇಬೇಕಾದ ವಯೋಮಿತಿಯ ಜನರಿಗೆ ದುಡಿದು ಸಂಪಾದಿಸಲು ಸಾಕಷ್ಟು ಅವಕಾಶ ಕಲ್ಪಿಸುವುದು ಇಂದಿನ ಅತ್ಯಂತ ಅವಶ್ಯಕತೆಯಾಗಿದೆ. ಬಡತನದ ಕಾರಣಗಳನ್ನು ತಿಳಿದುಕೊಂಡು ಪರಿಹಾರ ಕಂಡುಕೊಳ್ಳುವ ಮೂಲಕ ಬಡತನದ ನಿವಾರಣೆ ಮಾಡುವುದು. ವಾರ್ಡ್‌ಸಭೆ, ಗ್ರಾಮಸಭೆಗಳನ್ನು ಪ್ರಾಮಾಣಿಕವಾಗಿ ನಡೆಸುವ ಮೂಲಕ ಕ್ರಿಯಾಯೋಜನೆ ತಯಾರಿಸಿ ಕಾರ್ಯಕ್ರಮ ಅನುಷ್ಠಾನ ಮಾಡುವುದು ಅತೀ ಮುಖ್ಯ ಜವಾಬ್ದಾರಿಯಾಗಿದೆ.

ಸಾಮಾಜಿಕ, ಆರ್ಥಿಕ, ರಾಜಕೀಯ ಅಸಮಾನತೆಗಳ ನಿವಾರಣೆ, ಲಿಂಗ ತಾರತಮ್ಯ ಹೋಗಲಾಡಿಸುವುದು, ಸಮಾನ ಅವಕಾಶ ನೀಡುವ ಮೂಲಕ ಮಹಿಳೆಯರು ಪೌಷ್ಟಿಕ ಆಹಾರ ಪಡೆಯಲು, ಸಾಮಾಜಿಕ ನಿರ್ಧಾರಗಳನ್ನು ತೆಗೆದುಕೊಳ್ಳಲು, ಶಿಕ್ಷಣ ಮತ್ತು ಆರೋಗ್ಯದ ಸೌಲಭ್ಯಗಳನ್ನು ಪಡೆಯುವುದರ ಜೊತೆಗೆ ರಾಜಕೀಯದಲ್ಲಿ ಪಾಲ್ಗೊಳ್ಳುವಂತಾಗಬೇಕು. ಎಲ್ಲಾ ವರ್ಗದ ಜನರು ಪ್ರಜಾಪ್ರಭುತ್ವದ ಎಲ್ಲಾ ಪ್ರಕ್ರಿಯೆಗಳಲ್ಲಿ ಭಾಗವಹಿಸಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಮಾನ ಅವಕಾಶ ಪಡೆದುಕೊಂಡಾಗ ಮಾತ್ರ ಬಡತನ ನಿವಾರಣೆಯಾಗಿ ಅಭಿವೃದಿಯನ್ನು ಹೊಂದಲು ಸಾಧ್ಯವಾಗುತ್ತದೆ. ೧೯೪೭ ರಲ್ಲಿ ಪ್ರಥಮ ಪ್ರಧಾನಮಂತ್ರಿಯಾದ ಜವಾಹರಲಾಲ್ ನೆಹರು ಅವರು ಪ್ರಮಾಣ ವಚನ ಸ್ವೀಕರಿಸಿದ ಸಂದರ್ಭದಲ್ಲಿ "ಬಡತನ ಮತ್ತು ನಿರ್ಲಕ್ಷ್ಯದ ನಿವಾರಣೆ, ಜೀವ ಹಿಂಡುವ ಸಾಂಕ್ರಾಮಿಕ ಕಾಯಿಲೆಗಳಿಂದ ಮುಕ್ತಿ ಹಾಗೂ ಎಲ್ಲಾ ವರ್ಗದ ಜನರಿಗೂ ಅವಕಾಶಗಳು ಲಭ್ಯವಾಗುವಂತೆ ನೋಡಿಕೊಳ್ಳುವುದು ನಮ್ಮ ಗುರಿ" ಎಂದು ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ನಾವೆಷ್ಟು ಸಾಧಿಸಿದ್ದೇವೆ? ಎಂದು ನಾವು ನೀವೆಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

**೨. ಪರಿಹಾರ**

ಈಗ ಜಾರಿಗೆ ಬಂದಿರುವ ಉದ್ಯೋಗ ಖಾತರಿ ಕಾನೂನು ಇದಕ್ಕೆ ಸರಿಯಾದ ಪರಿಹಾರ ಮಾರ್ಗವಾಗಿದೆ. ಯಾಕೆಂದರೆ ಇದು ಬಡತನ ಮುಂದುವರಿಯಲು ಸಹಕಾರಿಯಾದ ಸಾಮಾಜಿಕ / ರಾಜಕೀಯ ಚೌಕಟ್ಟನ್ನು ಸುಧಾರಿಸುವ ಗುರಿಯನ್ನು ಹೊಂದಿದೆ. ಹೇಗೆಂದರೆ ಈ ಕಾನೂನು, ಗುರಿಸಾಧನೆಗೆ ಮಹತ್ವ ನೀಡುವುದರ ಜೊತೆಗೆ ಗುರಿಸಾಧನೆಗೆ ಅನುಸರಿಸಬೇಕಾದ ಮಾರ್ಗದ

ಬಗೆಗೂ ವಿಶೇಷ ಗಮನಹರಿಸಿದೆ. ಸ್ಥಳೀಯ ಸಂಸ್ಥೆಗಳ ಮೂಲಕ ಮತ್ತು ಸ್ಥಳೀಯ ಜನರ ಸಹಭಾಗಿತ್ವದೊಂದಿಗೆ ಯೋಜನೆ ತಯಾರಿಸಿ ಅನುಷ್ಠಾನಗೊಳಿಸುವುದು ಈ ಕಾನೂನಿನ ಮುಖ್ಯ ಲಕ್ಷಣವಾಗಿದೆ. ಇದರಿಂದಾಗಿ ಬಡವರ ಆರ್ಥಿಕ ಸ್ಥಿತಿ ಸುಧಾರಣೆಗೊಳ್ಳುವುದು ಮಾತ್ರವಲ್ಲ ಸ್ಥಳೀಯ ಸಂಸ್ಥೆಗಳು ಕುಡ ಬಲಗೊಳ್ಳುತ್ತವೆ. ಜನರು ತಮ್ಮ ಎಲ್ಲಾ ಸಮಸ್ಯೆಗಳನ್ನು ಪರಹರಿಸಿಕೊಳ್ಳಲು ಸ್ಥಳೀಯ ಸಂಸ್ಥೆಗಳನ್ನೇ ಅವಲಂಬಿಸುವ ಅನಿವಾರ್ಯತೆಯನ್ನು ನಿವಾರಿಸಲು ಸಹಕಾರಿಯಾಗುತ್ತದೆ. ಇದುವರೆಗಿನ ಕಾರ್ಯಕ್ರಮಗಳಲ್ಲಿ ಕಂಡು ಬಂದ ಮಾಹಿತಿ ಕೊರತೆ ಎಂದರೆ ಕಾರ್ಯಕ್ರಮಗಳ ಉದ್ದೇಶ, ಯಾರಿಗಾಗಿ ಕಾರ್ಯಕ್ರಮ ? ಎಲ್ಲಿ ಕಾರ್ಯಕ್ರಮ ನಡೆಸಲಾಗುತ್ತದೆ ? ಎನ್ನುವ ಮಾಹಿತಿ ಜನಸಾಮಾನ್ಯರಿಗೆ ತಿಳಿಸದೇ ಇರುವುದು ಹಾಗೂ ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಜನರು ಪಾಲ್ಗೊಳ್ಳುವಂತೆ ಮಾಡದೇ ಇರುವುದು, ಜನರ ಸಹಭಾಗಿತ್ವದಲ್ಲಿ ಸಮಗ್ರವಾದ ಯೋಜನೆ ರೂಪಿಸಿಕೊಳ್ಳದೇ ಇರುವುದಾಗಿದೆ. ಬಡತನದ ವಿವಿಧ ಆಯಾಮಗಳನ್ನು ಅರ್ಥ ಮಾಡಿಕೊಂಡಾಗ ಮಾತ್ರ ಬಡತನವನ್ನು ಸಂಪೂರ್ಣ ನಿವಾರಣೆ ಮಾಡಲು ಸಾಧ್ಯ.

**೨.೬ ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮಗಳು**

**೧. ಬಡತನ ನಿವಾರಣೆ ಮತ್ತು ಅಭಿವೃದ್ಧಿ**

ಬಡತನ ನಿವಾರಣೆಗೂ ಉದ್ಯೋಗ ಮತ್ತು ಅಭಿವೃದಿಗೂ ಪರಸ್ಪರ ಸಂಬಂಧವಿದೆ. ದೇಶದಲ್ಲಿ ಗ್ರಾಮೀಣ ನಿರುದ್ಯೋಗ ಒಂದು ದೊಡ್ಡ ಸಮಸ್ಯೆಯಾಗಿದೆ. ದುಡಿಯುವ ಸಾಮರ್ಥ್ಯ, ಅವಶ್ಯಕತೆ ಮತ್ತು ಸಮಯಕ್ಕೆ ಅನುಗುಣವಾಗಿ ಉದ್ಯೋಗ ನೀಡುವುದು ಇಂದಿನ ಅಗತ್ಯವಾಗಿದೆ. ಸ್ವಾತಂತ್ರ್ಯಾ ನಂತರ ಭಾರತದಲ್ಲಿ ಬಡತನ ನಿವಾರಣಾ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಬಡತನ ಹೋಗಲಾಡಿಸಲು ಗ್ರಾಮೀಣ ನಿರುದ್ಯೋಗ ನಿವಾರಿಸಲು, ಅಸಮಾನತೆ ತೊಲಗಿಸಲು ಜನರ ಇಚ್ಛೆಗೆ ಅನುಗುಣವಾಗಿ ಕಾರ್ಯಕ್ರಮಗಳನ್ನು ನೀಡಬೇಕು.

**೨. ಗ್ರಾಮೀಣ ನಿರುದ್ಯೋಗ - ಒಂದು ದೊಡ್ಡ ಸಮಸ್ಯೆ**

ವರ್ಷ ಪೂರ್ತಿ ಕೆಲಸ ಇಲ್ಲದಿರುವುದು, ಕಡಿಮೆ ಕೂಲಿ, ಪುರುಷ ಮಹಿಳೆಯರಿಗೆ ಸಮಾನ ವೇತನ ನೀಡುವುದು, ಕೆಲಸ ಹುಡುಕಿಕೊಂಡು ನಗರ ಪ್ರದೇಶಗಳಿಗೆ ವಲಸೆ ಹೋಗಿ ಅಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿರುವುದನ್ನು ತಪ್ಪಿಸಬೇಕಾಗಿರುತ್ತದೆ. ಬಾಲಕಾರ್ಮಿಕತೆ, ಸಂಪನ್ಮೂಲ ಹಾಗೂ ಸೇವೆಗಳಿಂದ ವಂಚಿತವಾಗಿರುವುದು, ಗ್ರಾಮೀಣ ಪ್ರದೇಶದಲ್ಲಿ ಒಂದು ದೊಡ್ಡ ಸಮಸ್ಯೆಯಾಗಿದೆ.

**೩. ಯೋಜನೆ ಮತ್ತು ಜನಭಾಗಿತ್ವ**

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನ ಸಹಭಾಗಿತ್ವದಿಂದ ತಯಾರಾಗುವ ಯೋಜನೆಯನ್ನು ಜನಯೋಜನೆ ಎಂದು ಹೇಳಬಹುದು.

**೪. ಯೋಜನೆಯ ವಿವಿಧ ಹಂತಗಳು**

- ಪ್ರಸಕ್ತ ಅಭಿವೃದ್ಧಿಯ ವಾಸ್ತವ ಸ್ಥಿತಿಯ ಸಮೀಕ್ಷೆ.
- ವಾಸ್ತವ ಸ್ಥಿತಿ ಮತ್ತು ಸಾಧಿಸಬೇಕಾದ ಗುರಿಯ ನಡುವಿನ ಅಂತರವನ್ನು ತಿಳಿದಕೊಳ್ಳುವುದು.
- ಗುರಿ ಸಾಧಿಸುವ ಮೂಲಕ ಅಂತರವನ್ನು ಕಡಿಮೆಗೊಳಿಸಲು ಕೈಗೊಳ್ಳಬೇಕಾದ ಕ್ರಮಗಳನ್ನು ಗುರುತಿಸುವುದು.

ಜನಪ್ರತಿನಿಧಿಗಳು, ಸ್ಥಳೀಯ ಅಧಿಕಾರಿಗಳು ಹಾಗೂ ಸಾಮಾಜಿಕ ಕಾರ್ಯಕರ್ತರನ್ನೊಳಗೊಂಡ ವಲಯವಾರು ಕಾರ್ಯ ತಂಡಗಳನ್ನು ಈ ಕೆಳಕಂಡಂತೆ ರಚನೆ ಮಾಡಬೇಕು.

ಅ) ಉತ್ಪಾದನಾ ವಲಯ
ಆ) ಸಾಮಾಜಿಕ ನ್ಯಾಯ ವಲಯ
ಇ) ಮೂಲಭೂತ ಸೌಕರ್ಯ ವಲಯ

ಕಾರ್ಯತಂಡಗಳು ಜನರ ಸಹಭಾಗಿತ್ವದಲ್ಲಿ ಗ್ರಾಮೀಣ ಸಮೀಕ್ಷೆ (ಪಿ.ಆರ್.ಎ) ಮೂಲಕ ಎಲ್ಲಾ ವಲಯಗಳಿಗೆ ಸಂಬಂಧಿಸಿದ ವಾಸ್ತವ ಸ್ಥಿತಿಯ ಸಮೀಕ್ಷೆ ಮತ್ತು ದಾಖಲೀಕರಣ ಮಾಡಬೇಕು. ಊರಿನ ಅಭಿವೃದಿಯ ಕೊರತೆಗಳು ಹಾಗೂ ಜನರ ಬೇಡಿಕೆಗಳನ್ನು ಗುರುತಿಸಿ ದಾಖಲಿಸಬೇಕು. ವಾಸ್ತವ ಸ್ಥಿತಿಯ ಸಮೀಕ್ಷೆಯ ಅಂಶಗಳನ್ನು ಗುಂಪು ಸಭೆಯ ಮುಂದೆ ಮಂಡಿಸುವುದು. ಗುರುತಿಸಲಾದ ಕೊರತೆಗಳು ಮತ್ತು ಬೇಡಿಕೆಗಳನ್ನು ವಿಮರ್ಶಿಸಬೇಕು. ವಾಸ್ತವ ಸ್ತಿತಿಯ ಸಮೀಕ್ಷೆ ಹಾಗೂ ಗುಂಪು ಸಭೆಯ ಅಂಶಗಳನ್ನು ವಾರ್ಡ್ ಸಭೆಯ ಮುಂದೆ ಮಂಡಿಸುವುದು. ಗುರುತಿಸಲಾದ ಕೊರತೆಗಳು ಮತ್ತು ಬೇಡಿಕೆಗಳನ್ನು ಚರ್ಚಿಸುವುದು. ಅಭಿವೃದಿಯ ಕ್ರಮಗಳಿಗೆ ಆಧ್ಯತೆಗಳನ್ನು ಗುರುತಿಸಬೇಕು. ಗ್ರಾಮ ಪಂಚಾಯತ್ ಮೂಲಕವೇ ಕಾರ್ಯತಂಡಗಳ ರಚನೆ ಮತ್ತು ಸಮೀಕ್ಷೆ ಮೂಡಬೇಕು. ವಾರ್ಡ್ ಸಭೆಗಳ ಸಂಘಟನೆಯ ಜವಾಬ್ದಾರಿ ಗ್ರಾಮ ಪಂಚಾಯತ್ ಸದಸ್ಯರಿಗೆ ಇರಬೇಕು. ಎಲ್ಲಾ ಇಲಾಖೆಗಳ ಕ್ಷೇತ್ರ ಸಿಬ್ಬಂದಿಗಳ ಭಾಗವಹಿಸುವಿಕೆಯನ್ನು ಖಾತರಿಪಡಿಸುವುದು. ವಸತಿ/ವಾರ್ಡ್ ಸಭೆಗಳಲ್ಲಿ ಗುರುತಿಸಲಾದ ಬೇಡಿಕೆಗಳನ್ನು ವಲಯವಾರು ವಿಂಗಡಿಸುವುದು. ವಾರ್ಡ್‌ವಾರು, ವಲಯವಾರು ಮತ್ತು ವರ್ಷವಾರು ಬೇಡಿಕೆಗಳ ಆದ್ಯತೆಗಳನ್ನು ನಿರ್ಧರಿಸಬೇಕು.

**೨.೭ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮತ್ತು ಪಂಚಾಯತಿಗಳ ಪಾತ್ರ:**

೨೦೦೬ ಫೆಬ್ರುವರಿ ೨ ರಂದು ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯನ್ನು ಪ್ರಾರಂಭದಲ್ಲಿ ದೇಶದ ೨೦೦ ಜಿಲ್ಲೆಗಳಲ್ಲಿ ಜಾರಿಗೆ ತರಲಾಯಿತು. ೨ ನೇ ಹಂತದಲ್ಲಿ ೨೦೦೭-೦೮ ರಿಂದ ಕಾಯ್ದೆಯ ಅನುಷ್ಠಾನವನ್ನು ಇನ್ನೂ ೧೩೦ ಜಿಲ್ಲೆಗಳಿಗೆ ವಿಸ್ತರಿಸಲಾಯಿತು. ಯು.ಪಿ.ಎ. ಸರಕಾರ ಪ್ರಕಟಿಸಿರುವಂತೆ ೨೦೦೮ ಎಪ್ರಿಲ್‌ನಿಂದ ಈ ಕಾಯ್ದೆಯನ್ನು ದೇಶದ ಎಲ್ಲ ಜಿಲ್ಲೆಗಳಲ್ಲಿ ಜಾರಿಗೊಳಿಸಲಾಗುತ್ತಿದೆ. ಕಾಯ್ದೆಯ ಸೂಕ್ತ ಅನುಷ್ಠಾನಕ್ಕಾಗಿ

ಕೇಂದ್ರ ಸರಕಾರ ನಿಯಮಗಳನ್ನು, ನಿಬಂಧನೆಗಳನ್ನು ರೂಪಿಸಿದೆ. ರಾಜ್ಯ ಸರಕಾರಗಳೂ ಸಹ ತಮ್ಮ ತಮ್ಮ ಪ್ರದೇಶಗಳಲ್ಲಿ ಕಾಯ್ದೆಯ ಸೂಕ್ತ ಅನುಷ್ಠಾನಕ್ಕಾಗಿ ನಿಯಮ, ನಿಬಂಧನೆಗಳನ್ನು ರೂಪಿಸಬೇಕಾಗಿದೆ.

ಸಾಮಾಜಿಕ ಸಂಶೋಧನೆಯ ಪ್ರಕ್ರಿಯೆಯನ್ನು ೨೦೦೭ ರ ಮೇ ೬ ರಿಂದ ಮೇ ೨೪ ರವರೆಗೆ ನಡೆಸಲು ನಿರ್ಧರಿಸಲಾಯಿತು. ಈ ಸಾಮಾಜಿಕ ಪರಿಶೋಧನೆಯಲ್ಲಿ ರಾಜ್ಯದ ಪ್ರತಿ ಜಿಲ್ಲೆಯ ಪ್ರತಿನಿಧಿಗಳೇ ಅಲ್ಲದೆ ದೇಶದ ಅನೇಕ ರಾಜ್ಯಗಳ ೩೦೦ಕ್ಕೂ ಹೆಚ್ಚು ಪ್ರತಿನಿಧಿಗಳು ಭಾಗವಹಿಸಿದ್ದರು. ಈ ಸಾಮಾಜಿಕ ಪರಿಶೋಧನೆಯಲ್ಲಿ ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯ ಮತ್ತು ಕೇರಳ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ವಿಶೇಷ ರೀತಿಯಲ್ಲಿ ಸಹಕಾರ ನೀಡಿದರು. ಪ್ರೊ. ಜೀನ್ ಡ್ರೇಜ್, ಅರುಣರಾಯ ಮತ್ತು ರಾಜಾ ನಿಕಿಲ್ ಡೇ, ಗಿರೀಶ ಬುಗ್‌ದಾ, ಬಲರಾಮ್, ಗುರುಜಿತ್ ಅವರಂತಹ ಸಾಮಾಜಿಕ ಕಾರ್ಯಕರ್ತರು ಹಾಗೂ ಆಂಧ್ರಪ್ರದೇಶದ ಗ್ರಾಮೀಣಾಭಿವೃದ್ಧಿಯ ಖಾತೆಯ ಕರುಣಾ ಮತ್ತು ಸೋಮಾಜಿಯವರೂ ಸಹ ಪ್ರಕ್ರಿಯೆಯ ವಿವರಗಳನ್ನು ನೀಡಲು ಹಾಜರಿದ್ದರು. ಪ್ರತಿನಿಧಿಗಳಿಗೆ ೨೦೦೭ ರ ಮೇ ೧೩ ರಿಂದ ಮೇ ೧೫ ರವರೆಗೆ ರಾಂಚಿಯ ಪಂಚಾಯತ್ ರಾಜ್ ತರಬೇತಿ ಕೇಂದ್ರದಲ್ಲಿ ೩ ದಿನಗಳ ತರಬೇತಿ ಕಾರ್ಯಕ್ರಮವನ್ನುನಡೆಸಲಾಯಿತು. ಹೀಗೆ ತರಬೇತಿ ಪಡೆದವರನ್ನು ೨೫ ಗುಂಪುಗಳಾಗಿ ವಿಂಗಡಿಸಿ, ಸಾಮಾಜಿಕ ಪ್ರಶ್ನೋತ್ತರ ಸಭೆಗಳನ್ನು ನಡೆಸಲು ೧೫ ಪಂಚಾಯತಿಗಳಿಗೆ ಕಳಿಸಲಾಯಿತು. ಗ್ರಾಮ ಸಭೆಗಳ ಸಹಕಾರದಿಂದ ಈ ಗುಂಪುಗಳು ತಮ್ಮ ಕರ್ತವ್ಯಗಳನ್ನು, ಜವಾಬ್ದಾರಿಗಳನ್ನು ನಿರ್ವಹಿಸಿದವು. ಈ ಎಲ್ಲ ೧೫ ಗುಂಪುಗಳು ಒಟ್ಟಿಗೆ ೮೮ ಪರಿಯೋಜನೆಗಳ ಸಾಮಾಜಿಕ ಪರಿಶೋಧನೆಯನ್ನು ನಡೆಸಿದವು ಮತ್ತು ಅನೇಕ ಲೋಪದೋಷಗಳು ಇವುಗಳ ಗಮನಕ್ಕೆ ಬಂದವು. ಗ್ರಾಮಸ್ಥರೂ ನಡೆಸಿದ ಸಾಮೂಹಿಕ ಪ್ರಶ್ನೋತ್ತರ ಸಭೆಗಳಲ್ಲಿ ಈ ಲೋಪದೋಷಗಳನ್ನು ಜಿಲ್ಲೆ ಮತ್ತು ರಾಜ್ಯಮಟ್ಟದ ಅಧಿಕಾರಿಗಳ ಮುಂದಿಡಲಾಯಿತು.

**ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿರುವ ಲೋಪದೋಷಗಳು :**

- ಕೊಡಬೇಕಾಗಿದ್ದ ಪೂರ್ಣ ವೇತನ ಕೊಡದೆ ಇದ್ದುದು ಅತ್ಯಂತ ಪ್ರಮುಖ ಸಮಸ್ಯೆ.
- ಕೆಲಸದ ಎಲ್ಲ ಸ್ಥಳಗಳಲ್ಲಿ ಪರೀಕ್ಷೆ ನಡೆಸಿದಾಗ ವೇತನವನ್ನು ಪೂರ್ಣವಾಗಿ ಕೊಟ್ಟಿಲ್ಲವೆಂದು ಕೆಲಸಗಾರರು ದೂರಿದರು. ಕೆಲವು ಸ್ಥಳಗಳಲ್ಲಿ ೧೫ ದಿನಗಳಿಂದ ವೇತನ ಬಾಕಿ ಇತ್ತುಹಾಗೂ ಇನ್ನೂ ಕೆಲವು ಕಡೆ ೩ ತಿಂಗಳವರೆಗೂ ವೇತನ ಕೊಟ್ಟಿರಲಿಲ್ಲ.
- ಕನಿಷ್ಠ ಕೂಲಿಗಿಂತಲೂ ಕಡಿಮೆ ಪ್ರಮಾಣದ ಕೂಲಿ ಕೊಟ್ಟಿರುವುದು ಎಲ್ಲ ಸ್ಥಳಗಳಲ್ಲಿ ಕಂಡುಬಂದಿತು.

- ಒಬ್ಬನೇ ಕೆಲಸಗಾರ ೨ ಜಾಬ್‌ಕಾರ್ಡ್‌ಗಳನ್ನು ಹೊಂದಿದ್ದ ಪ್ರಕರಣಗಳೂ ಬೆಳಕಿಗೆ ಬಂದವು.
- ಕೆಲಸ ಮಾಡುತ್ತಿದ್ದಾಗ ಗಾಯಗೊಂಡ ಕೆಲಸಗಾರರಿಗೆ ಚಿಕಿತ್ಸೆ ಕೊಡುವ ಏರ್ಪಾಡು ಇಲ್ಲದೇ ಇದ್ದುದು ಕಂಡುಬಂದಿತು.
- ಕೆಲಸ ಮಾಡುವ ಸ್ಥಳದಲ್ಲಿ ಪ್ರಥಮ ಚಿಕಿತ್ಸೆ ಲಭ್ಯವಿದ್ದರೂ ಎಲ್ಲ ಕೆಲಸಗಾರರಿಗೆ ಇದು ತಿಳಿದಿರಲಿಲ್ಲ.
- ಅಂದಾಜುಗಳಲ್ಲೂ ಬೇರೆ ಬೇರೆ ನಮೂನೆಯ ಮಣ್ಣುಗಳಿಗೆ ಬೇರೆ ಬೇರೆ ಹಂತಗಳಲ್ಲಿ ಬೇರೆ ಬೇರೆ ದರಗಳನ್ನು ನಮೂದಿಸಲಾಗಿತ್ತು. ಆದರೆ ಕೆಲಸಗಾರರಿಗೆ ಅಂದಾಜುಗಳ ಪ್ರಕಾರ ಕೂಲಿ ಕೊಟ್ಟಿರಲಿಲ್ಲ.
- ಎಲ್ಲ ಸ್ಥಳಗಳಲ್ಲಿ ಕೆಲಸಗಾರರ ಪಟ್ಟಿಗಳಲ್ಲಿ ಮತ್ತು ಜಾಬ್‌ಕಾರ್ಡ್‌ಗಳಲ್ಲಿ ನಕಲಿ ಹಾಜರಾತಿಗಳು ಕಂಡುಬಂದವು.
- ಅಂಚೆ ಕಛೇರಿಯಲ್ಲಿ ಖಾತೆಗಳನ್ನು ತೆರೆಯಲು ಪೋಸ್ಟ್‌ಮಾಸ್ಟರ್ ಕೆಲಸಗಾರರಿಂದ ರೂ. ೭೦ ಗಳಿಂದ ೧೫೦ ರೂ.ಗಳವರೆಗೆ ಲಂಚ ಪಡೆದಿದ್ದು ಕಂಡುಬಂದಿತು.
- ಕೆಲಸದ ಅನೇಕ ಸ್ಥಳಗಳಲ್ಲಿ ಸೂಚನಾ ಫಲಕಗಳು ಇರಲಿಲ್ಲ.
- ಯಾವುದೇ ಬಲವಾದ ಕಾರಣವಿಲ್ಲದೆ ಅರ್ಧಕ್ಕೂ ಹೆಚ್ಚಿನ ಕಾಮಗಾರಿಯನ್ನು ೧ ತಿಂಗಳಿಗೂ ಹೆಚ್ಚು ಕಾಲ ನಿಲ್ಲಿಸಿದ್ದು ಕಂಡುಬಂದಿತು.
- ಯಾವುದೇ ಸ್ಥಳದಲ್ಲೂ ಅಂಗವಿಕಲರಿಗೆ ಯಾವ ರೀತಿಯ ಕೆಲಸವನ್ನೂ ನೀಡಿರಲಿಲ್ಲ. ಯಾವುದೇ ಅಂಗವಿಕಲ ವ್ಯಕ್ತಿಗೂ ಜಾಬ್‌ಕಾರ್ಡ್‌ನ್ನು ಸಹ ನೀಡಿರಲಿಲ್ಲ. ಮಹಿಳೆಯರಿಗೆ ನೀಡಲಾಗಿದ್ದ ಜಾಬ್‌ಕಾರ್ಡ್‌ಗಳೂ ಸಹ ಕಂಡುಬರಲಿಲ್ಲ.
- ಒಂದು ವರ್ಷ ಕಳೆದಿದ್ದರೂ ಅನೇಕ ಕುಟುಂಬಗಳಿಗೆ ಜಾಬ್‌ಕಾರ್ಡ್‌ಗಳನ್ನು ನೀಡಿರಲಿಲ್ಲ. ಕೆಲಸಕ್ಕಾಗಿ ಬೇಡಿಕೆ ಇದ್ದರೂ ಕೆಲಸ ಕೊಟ್ಟಿರಲಿಲ್ಲ. ಕೆಲಸ ಬಯಸಿದವರ ಅರ್ಜಿಗಳನ್ನು ಸ್ವೀಕರಿಸಿರಲಿಲ್ಲ.
- ನಿರುದ್ಯೋಗ ಭತ್ಯೆ ಪಡೆಯಲು ಅರ್ಹವಾಗಿದ್ದ ಕುಟುಂಬಗಳಿಗೆ ನಿಯಮಿತವಾಗಿ ಮೋಸ ಮಾಡಲಾಗುತ್ತಿದೆ.
- ಬಹುತೇಕ ಪ್ರತಿಯೊಂದು ಕಾಮಗಾರಿ ಸ್ಥಳದಲ್ಲೂ ಕೆಲಸಗಾರರ ಜಾಬ್‌ಕಾರ್ಡ್‌ಗಳು ಏಜಂಟರ ಬಳಿ ಇದ್ದುದು ಕಂಡುಬಂದಿತು.
- ಪ್ರತಿಯೊಂದು ಕಾಮಗಾರಿಯ ಸ್ಥಳದಲ್ಲೂ ಕೆಲಸಗಾರರ ಪಟ್ಟಿಯಲ್ಲಿನ ಹೆಸರುಗಳು ಕುಟುಂಬಗಳ ಮುಖ್ಯಸ್ಥರದ್ದೇ ಆಗಿದ್ದರೂ ಅವುಗಳಲ್ಲಿ ಇತರ

ಸದಸ್ಯರೂ ಸಹ ಕೆಲಸ ಮಾಡುತ್ತಿದ್ದರು. ಮಹಿಳೆಯರಿಗೆ ಬಟವಡೆ ಮಾಡಿದ ವೇತನಗಳನ್ನು ಅದೇ ಮನೆಯ ಮುಖ್ಯಸ್ಥನ ಹೆಸರಿನಲ್ಲಿ ತೋರಿಸಲಾಗುತ್ತಿತ್ತು.

- ಪ್ರತಿಯೊಂದು ಕಾಮಗಾರಿ ಸ್ಥಳದಲ್ಲಿ ಕೆಲಸಗಾರರ ಪಟ್ಟಿಯಲ್ಲಿ ಒಬ್ಬ ವ್ಯಕ್ತಿಯ ಹೆಸರನ್ನು ಒಂದಕ್ಕಿಂತ ಹೆಚ್ಚು ಸಲ ನಮೂದಿಸಿರುವುದು ಸರ್ವೇ ಸಾಧಾರಣವಾಗಿತ್ತು.
- ಸ್ವಲ್ಪ ಖರ್ಚು ಮಾಡಿ ಕೆರೆಗೆ ಒಂದಿಷ್ಟು ದುರಸ್ಥಿ ಮಾಡಿಸಿ ಹೊಸ ಕೆರೆಗೆ ಒದಗಿಸಿದ ಹಣವನ್ನು ಲಪಟಾಯಿಸಲು ಇಂಜಿನಿಯರ್, ಪಂಚಾಯತಿ ನೌಕರ, ಮತ್ತಿತರ ನೌಕರರು ಮಾಡಿದ್ದ ಒಳಸಂಚನ್ನು ಸಾಮಾಜಿಕ ಪರಿಶೋಧನಾ ತಂಡ ಬಹಿರಂಗಗೊಳಿಸಿತು.
- ೨೦೦೭ ರ ಮೇ ೨೦ ರಂದು ಎಲ್ಲ ೧೫ ಪಂಚಾಯತಿಗಳಲ್ಲಿ ಸಾಮೂಹಿಕ ಪ್ರಶ್ನೋತ್ತರ ಸಭೆಗಳನ್ನು ಏಕ ಕಾಲದಲ್ಲಿ ನಡೆಸಲಾಯಿತು. ಹಾಗೂ ಸಾವಿರಗಟ್ಟಲೆ ಸಂಖ್ಯೆಯಲ್ಲಿ ಗ್ರಾಮಸ್ಥರು ಈ ಸಭೆಗಳಲ್ಲಿ ಭಾಗವಹಿಸಿದ್ದರು. ಬ್ಲಾಕ್‌ಮಟ್ಟದಿಂದ ರಾಜ್ಯಮಟ್ಟದವರೆಗಿನ ಪ್ರತಿನಿಧಿಗಳು ಈ ಬಹಿರಂಗ ಸಭೆಗಳಲ್ಲಿ ಭಾಗವಹಿಸಿ ಜನರ ಸಮಸ್ಯೆಗಳ ನೇರ ಪರಿಚಯ ಮಾಡಿಕೊಂಡರು ಹಾಗೂ ಸಾಮಾಜಿಕ ಪರಿಶೋಧನೆಯ ವರದಿಯನ್ನು ಪಡೆದರು. ಈ ಬಹಿರಂಗ ಸಭೆಗಳಲ್ಲಿ ಅನೇಕ ಲೋಪದೋಷಗಳನ್ನು ಸರಿಪಡಿಸಲು ಸ್ಥಳದಲ್ಲೇ ಕ್ರಮ ಕೈಕೊಳ್ಳಲಾಯಿತು.
- ೧೫ ತಿಂಗಳು ಕಳೆದಿದ್ದರೂ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಜಾರಿಗೆ ಯಾವೊಬ್ಬ ಅಧಿಕಾರಿ ಅಥವಾ ನೌಕರರನ್ನು ನೇಮಿಸಿಲ್ಲ. ಇದರಿಂದಾಗಿ ರಾಜ್ಯದಲ್ಲಿ ೬ ಸಾವಿರ ಹುದ್ದೆಗಳು ಖಾಲಿ ಇವೆ. ಈ ಹುದ್ದೆಗಳನ್ನು ತಕ್ಷಣ ತುಂಬಲು ಪ್ರಯತ್ನಿಸಬೇಕು.
- ಈ ಸಾಮಾಜಿಕ ಪರಿಶೋಧನೆಯ ಸಮಯದಲ್ಲಿ ಅಳತೆಯಲ್ಲಿನ ಲೋಪದೋಷಗಳು ಹಾಗೂ ಸಕಾಲಕ್ಕೆ ಅಳತೆ ಮಾಡದೆ ಇದ್ದುದರಿಂದ ಕೆಲಸಗಾರರಿಗೆ ಕಿರುಕುಳ ಹೆಚ್ಚಾದದ್ದು ಕಂಡುಬಂದಿತು. ಬೇರೆ ಬೇರೆ ನಮೂನೆಯ ಮಣ್ಣುಗಳು ಮತ್ತು ಬೇರೆ ಬೇರೆ ಮಟ್ಟಗಳಿಗೆ ತಕ್ಕಂತೆ ನಿಗದಿ ಮಾಡಲಾಗಿದ್ದ ವೇತನಗಳನ್ನು ಕೆಲಸಗಾರರಿಗೆ ಕೊಟ್ಟಿರುವದಿಲ್ಲ. ಆದ್ದರಿಂದ ಸೂಕ್ತ ಅಧ್ಯಯನ ಕೈಕೊಂಡು ರಾಜ್ಯದಲ್ಲಿ ಏಕಪ್ರಕಾರವಾದ ದರಗಳನ್ನು ಮಾಡಬೇಕಾದದ್ದು ಅಗತ್ಯ.
- ಸಾಮಾಜಿಕ ಪರಿಶೋಧನೆಯ ಸಮಯದಲ್ಲಿ ಪ್ರತಿಯೊಂದು ಸ್ಥಳದಲ್ಲೂ ವೇತನಗಳ ವಿಳಂಬ ಪಾವತಿ, ಕಡಿಮೆ ವೇತನಗಳ ಪಾವತಿ ಹಾಗೂ

ವೇತನಗಳನ್ನು ಕೊಡದೇ ಇದ್ದ ದೂರುಗಳು ಕಂಡುಬಂದವು. ಈ ನ್ಯೂನ್ಯತೆಗಳನ್ನು ನಿವಾರಿಸಲು ಎಲ್ಲ ಕೆಲಸಗಾರರು ಸ್ಥಳೀಯ ಅಂಚೆ, ಸಮೀಪದ ಅಂಚೆ ಕಛೇರಿಯಲ್ಲಿ ಉಳಿತಾಯ ಖಾತೆಗಳನ್ನು ತೆರೆಯುವದಕ್ಕೆ ಹಾಗೂ ಹಣ ಈ ಖಾತೆಗಳಿಗೆ ಜಮಾ ಆಗುವದಕ್ಕೆ ಆದೇಶಗಳನ್ನು ತಕ್ಷಣ ಹೊರಡಿಸಬೇಕು.

- ಪಂಚಾಯತಿ ಚುನಾವಣೆಗಳು ನಡೆಯದೇ ಇರುವದರಿಂದ ಕಾಯ್ದೆಯ ಅನುಷ್ಠಾನದಲ್ಲಿ ಬಹಳ ತೊಂದರೆ ಎದುರಾಗುತ್ತಿದೆ. ಪ್ರತಿ ಹಳ್ಳಿಯಲ್ಲೂ ಏಜಂಟರು ಗ್ರಾಮಸಭೆಗಿಂತ ಹೆಚ್ಚು ಪ್ರಬಲವಾಗಿರುವಂತೆ ಕಂಡುಬಂದಿತು. ನಿರ್ಧಾರ ಕೈಕೊಳ್ಳುವುದರಲ್ಲಿ ಮತ್ತು ಕಾಮಗಾರಿಗಳ ಮೇಲೆ ನಿಗಾ ಇಡುವುದರಲ್ಲಿ ಪ್ರತಿ ಗ್ರಾಮಸಭೆಯ ಪಾತ್ರ ಇರುವುದನ್ನು ಖಾತರಿ ಪಡಿಸಿಕೊಳ್ಳಬೇಕಾಗಿದೆ. ಅದರಿಂದ ಪಾರದರ್ಶಕತೆ ಮತ್ತು ಹೊಣೆಗಾರಿಕೆ ಹೆಚ್ಚಾಗುತ್ತದೆ.

ಪಾರದರ್ಶಕತೆ ಮತ್ತು ಹೊಣೆಗಾರಿಕೆ ಮಟ್ಟಗಳನ್ನು ಎತ್ತರಿಸಲು ಕಾಮಗಾರಿ ಸ್ಥಳದಲ್ಲೂ ಕೆಲಸಗಾರರ ಪಟ್ಟಿ, ಅಳತೆ ಪುಸ್ತಕದ ಪ್ರತಿ, ಹಾಜರಿ ರಜಿಸ್ಟರ್, ಅಂದಾಜು ಕಾಮಗಾರಿ ಆದೇಶ, ನೋಟಿಸು ಸೂಚನಾ ಫಲಕ ಮುಂತಾದ ಎಲ್ಲ ಸಂಬಂಧಪಟ್ಟ ಮಾಹಿತಿಯನ್ನು ಸಿದ್ಧವಾಗಿಟ್ಟುಕೊಂಡಿರುವುದನ್ನು ಕಡ್ಡಾಯಗೊಳಿಸುವ ನಿರ್ದೇಶನಗಳನ್ನು ನೀಡಬೇಕು. ಹೀಗೆ ಮಾಡುವುದರಿಂದ ನಿಗಾವನೆ ಸಮಿತಿಗೆ ಹಾಗೂ ಇತರ ಪ್ರಜೆಗಳಿಗೆ ಕಾಮಗಾರಿಯ ವಿವರಗಳನ್ನು ಪಡೆಯುವುದು ಸಾಧ್ಯವಾಗುತ್ತದೆ.

- ಕೇಂದ್ರದ ತಂಡ ಮತ್ತು ಜಾರ್ಖಂಡ ರಾಜ್ಯದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ವಾಚ್ ಸಲ್ಲಿಸಿದ ಸಾರ್ವಜನಿಕ ಪರಿಶೋಧನಾ ವರದಿಯ ಮೇರೆಗೆ ಜಿಲ್ಲಾಧಿಕಾರಿ ಕೂಡಲೇ ಕ್ರಮಕೈಕೊಂಡು ೧೫ ಸದಸ್ಯರ ವಿಚಾರಣಾ ಸಮಿತಿಯನ್ನು ರಚಿಸಿದರು. ವಿಚಾರಣಾ ಸಮಿತಿ ಏಳು ದಿನಗಳಲ್ಲಿ ತನ್ನ ವರದಿಗಳನ್ನು ಜಿಲ್ಲಾಧಿಕಾರಿಯವರಿಗೆ ಸಲ್ಲಿಸಿತು. ಈ ವರದಿಯನ್ನಾಧರಿಸಿ ಜಿಲ್ಲಾಧಿಕಾರಿ ೧೬ ಮಂದಿ ನೌಕರರು ಮತ್ತು ಐವರು ಪದಾಧಿಕಾರಿಗಳ ವಿರುದ್ಧ ಪ್ರಕರಣಗಳನು ನೋಂದಾಯಿಸಿದರು. ಮತ್ತು ತಪ್ಪಿತಸ್ಥ ಅಂಚೆ ನೌಕರರ ವಿರುದ್ಧ ಪ್ರಕರಣಗಳನ್ನು ನೋಂದಾಯಿಸಿದರು. ಸೂಕ್ತ ಕ್ರಮಕೈಕೊಳ್ಳುವಂತೆ ಮುಖ್ಯ ಪೋಸ್ಟ್ ಮಾಸ್ಟರ್ ಅವರನ್ನು ಕೋರಲಾಯಿತು. ರಾಂಚೀಯ ಜಿಲ್ಲಾಧಿಕಾರಿ ಇತರ ಇಲಾಖೆಗಳ ಅಧಿಕಾರಿಗಳ ವಿರುದ್ಧ ಕ್ರಮ ಕೈಕೊಳ್ಳಲು ಆದೇಶ ನೀಡಿದರು.

ನಂತರ ೨೦೦೭ ಮೇ ೨೩ ರಂದು ಸಾಮಾಜಿಕ ಸಂಶೋಧನಾ ವರದಿಗಳು ಮತ್ತು ಅವುಗಳ ತೀರ್ಮಾನಗಳು, ಸಲಹೆಗಳನ್ನು ಪರಿಶೀಲಿಸಲು ಜಾರ್ಖಂಡದ ರಾಜಧಾನಿ

ರಾಂಚೀಯಲ್ಲಿ ಪ್ರಮುಖ ಸಭೆಯೊಂದನ್ನು ನಡೆಸಲಾಯಿತು. ಭಾರತ ಸರಕಾರದ ಗ್ರಾಮೀಣ ಅಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ರಾಷ್ಟ್ರೀಯ ಮಂಡಳಿಯ ಸದಸ್ಯರು, ಯೋಜನಾ ಆಯೋಗದ ಸದಸ್ಯರು, ರಾಜ್ಯದ ಎಲ್ಲ ಜಿಲ್ಲಾಧಿಕಾರಿಗಳು, ಬ್ಲಾಕ್ ಅಭಿವೃದ್ಧಿ ಅಧಿಕಾರಿಗಳು, ಬುದ್ಧಿಜೀವಿಗಳು ಮತ್ತು ಸಾಮಾಜಿಕ ಹಾಗೂ ಪೌರ ಸಂಸ್ಥೆಗಳ ಪ್ರತಿನಿಧಿಗಳು, ಮತ್ತಿತರರು ಈ ಸಭೆಯಲ್ಲಿ ಭಾಗವಹಿಸಿದ್ದರು.

- ತಮ್ಮ ತಮ್ಮ ಜಿಲ್ಲೆಗಳಲ್ಲಿ ಸಾಮಾಜಿಕ ಪರಿಶೋಧನೆ ನಡೆಸಬೇಕೆಂದು ಜಾರ್ಖಂಡ ಸರಕಾರದ ಪ್ರಧಾನ ಕಾರ್ಯದರ್ಶಿಯವರು ಎಲ್ಲ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಿದರು.
- ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯು ಏಜಂಟ್ ಎಂಬ ಪದದ ಬಳಕೆಗೆ ಅವಕಾಶ ನೀಡಿಲ್ಲವಾದ್ದರಿಂದ ಎಲ್ಲೂ ಈ ಪದವನ್ನು ಬಳಸಬಾರದು. ಈ ಕಾಯ್ದೆಯಡಿ ಯಾವ ಕಾಂಟ್ರ್ಯಾಕ್ಟರ್ ಇರುವಂತಿಲ್ಲ. ಎಲ್ಲ ಕಾಮಗಾರಿಗಳ ಸ್ಥಳಗಳಲ್ಲಿ ಸಣ್ಣ ಮಕ್ಕಳಿಗೆ ಕ್ರೇಶ್ ಸೌಲಭ್ಯವಿರಬೇಕು ಹಾಗೂ ಕೆಲಸಗಾರರಿಗೆ ಕುಡಿಯುವ ನೀರು ಒದಗಿಸಲು ವ್ಯವಸ್ಥೆ ಮಾಡಬೇಕು.
- ನೇಮಕಾತಿಗಳಿಗೆ ಸಂಬಂಧಿಸಿದ ಎಲ್ಲ ವಿಧಿವಿಧಾನಗಳನ್ನು ಮೂರು ತಿಂಗಳಲ್ಲಿ ಮುಗಿಸಬೇಕು.
- ಬಾಕಿ ಇರುವ ವೇತನಗಳನ್ನು ಕೆಲಸಗಾರರಿಗೆ ತಕ್ಷಣವೇ ನೀಡಬೇಕು.

೨೦೦೭ ರ ಮೇ ೨೪ ರಂದು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವ್ಯವಸ್ಥಾಪಕ ಸಮಿತಿ ಹಾಗೂ ಜಾರ್ಖಂಡ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವಾಚ್ ಸಂಸ್ಥೆಯ ಸದಸ್ಯರು ಜಾರ್ಖಂಡ ರಾಜ್ಯದ ಮುಖ್ಯಮಂತ್ರಿ ಹಾಗೂ ಅವರ ಸಚಿವಾಲಯದ ಇತರ ಸಚಿವರನ್ನು ತಮ್ಮ ಸಾಮಾಜಿಕ ಸಂಶೋಧನೆ ಕುರಿತ ಹೊಸ ಕಾರ್ಯತಂತ್ರದ ಬಗ್ಗೆ ಚರ್ಚಿಸಿದರು. ಸಾಮಾಜಿಕ ಪರಿಶೋಧನೆ ಸಾಮೂಹಿಕ ತಿಳುವಳಿಕೆಗೆ ಉತ್ತೇಜನ ನೀಡುವ ಹಾಗೂ ಜನತೆಯ ಸಹಭಾಗಿತ್ವವನ್ನು ಖಾತರಿ ಪಡಿಸಿಕೊಳ್ಳುವ ಪ್ರಕ್ರಿಯೆಯಾಗಿದೆ. ಪಾರದರ್ಶಕತೆ ಮತ್ತು ಹೊಣೆಗಾರಿಕೆಯನ್ನು ಖಚಿತಪಡಿಸಿಕೊಳ್ಳಲು ಜನತೆಯ ಸಹಭಾಗಿತ್ವ ಅತ್ಯಗತ್ಯ ಹಾಗೂ ನಾಗರೀಕ ಗುಂಪುಗಳು ಮಾತ್ರ ಗ್ರಾಮ ಸಭೆಗಳ ಮೂಲಕ ಸಾಮಾಜಿಕ ಪರಿಶೋಧನೆಯ ಪ್ರಕ್ರಿಯೆಯಲ್ಲಿ ಅಳವಡಿಸಿಕೊಂಡಾಗ ಮಾತ್ರ ಅವು ತಳಮಟ್ಟಕ್ಕೆ ನಿಧಾನವಾಗಿ ಹರಡುತ್ತವೆ. ಈ ಅಭ್ಯಾಸವನ್ನು ಜನಪ್ರಿಯಗೊಳಿಸಲು ಸಾಮಾಜಿಕ ಪರಿಶೋಧನೆಗಳನ್ನು ನಿಯಮಿತವಾಗಿ ನಡೆಸಬೇಕಾದದ್ದು ಅಗತ್ಯ ಹಾಗೂ ಯೋಜನೆಗಳ ಭೌತಿಕ ಪರೀಕ್ಷೆ ನಡೆಸಲು ಗ್ರಾಮೀಣ ಜನತೆ ತಮ್ಮನ್ನು ಸಂಪೂರ್ಣವಾಗಿ ಅದರಲ್ಲಿ ತೊಡಗಿಸಿಕೊಳ್ಳಬೇಕು. ನಿಜವಾದ ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ಜನರಿಗೆ ಮಾಲೀಕತ್ವದ ಹಕ್ಕನ್ನು ಕೊಡಬೇಕಾದ

ಅಗತ್ಯವಿದೆ. ಈ ಅರ್ಥದಲ್ಲಿ ಸಾಮಾಜಿಕ ಪರಿಶೋಧನೆ ಇಂದು ಪರಿಣಾಮಕಾರಿಯಾದ ಸಾಧನವಾಗಿದೆ ಹಾಗೂ ಬಡಜನರಿಗೆ ಮತ್ತು ಅವಕಾಶ ವಂಚಿತರಿಗೆ ಪ್ರಜಾಸತ್ತೆಯ ತಿಳುವಳಿಕೆಯ ಜೊತೆಯಲ್ಲಿ ಅವರ ಮಾಲೀಕತ್ವದ ಹಕ್ಕನ್ನು ಹಿಂತಿರುಗಿಸುತ್ತದೆ.

ಟಿಪ್ಪಣಿ :

- ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕರ್ನಾಟಕ : ದಿನಾಂಕ : ೮-೨-೨೦೦೭ ರ ಕರ್ನಾಟಕ ರಾಜ್ಯ ಪ್ರಪತ್ರ.
- ಜಿ. ಎಲ್. ಬಡಿಗೇರ, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ ಸಂಗಮೇಶ್ವರ ಪ್ರಕಾಶನ, ಸಂಕೇಶ್ವರ, ೨೦೦೧.
- ಎಚ್. ವಿ. ನಾಗೇಶ, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ, ೧೯೯೨

# ಅಧ್ಯಾಯ ಮೂರು
# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಧಿನಿಯಮ

# ಅಧ್ಯಾಯ ಮೂರು
# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಧಿನಿಯಮ

ಸ್ವಾತಂತ್ರ್ಯಾ ನಂತರ ದೇಶದಲ್ಲಿ ಈವರೆಗೆ ಜಾರಿಗೊಂಡ ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮಗಳ ಸಾಧಕ - ಬಾಧಕಗಳನ್ನು ಗಮನದಲ್ಲಿಟ್ಟುಕೊಂಡು ಭಾರತ ಸರ್ಕಾರ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ - ೨೦೦೫" ನ್ನು ದಿನಾಂಕ ೦೭-೦೯-೨೦೦೮ ರಂದು ಭಾರತದ ರಾಷ್ಟ್ರ ಪತ್ರದಲ್ಲಿ ಪ್ರಕಟಿಸಿದೆ. ಆರಂಭದಲ್ಲಿ ದೇಶದ ೨೦೦ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಿ, ಪ್ರಸಕ್ತ ಆರ್ಥಿಕ ವರ್ಷದಿಂದ ದೇಶದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಲಾಗಿದೆ.

ಈ ಕಾರ್ಯಕ್ರಮವು ೧೦೦ ದಿನಗಳ ಉದ್ಯೋಗವನ್ನು ಪ್ರತಿ ಕುಟುಂಬಕ್ಕೂ ನೀಡುವ ಭರವಸೆ ಹೊಂದಿದ್ದು ಗ್ರಾಮಗಳ ಉತ್ಪಾದನೆ ಸಂಪತ್ತನ್ನು ಹೆಚ್ಚಿಸುವುದರೊಂದಿಗೆ ಮೂಲಭೂತ ಸೌಕರ್ಯಗಳಿಗಾಗಿ ಸಾಕಷ್ಟು ಸಂಪನ್ಮೂಲ ಒದಗಿಸಿ ಗ್ರಾಮೀಣ ಅರ್ಥ ವ್ಯವಸ್ಥೆಯನ್ನು ಬಲಗೊಳಿಸುವ ಪ್ರಮುಖ ಅವಕಾಶವಿರುವುದನ್ನು ಸರ್ಕಾರ ಹಾಗೂ ಸಾಮಾಜಿಕ ಸಂಸ್ಥೆಗಳು ಗುರುತಿಸಿವೆ.

ರಾ.ಗ್ರಾ.ಉ.ಖಾ. ಅಧಿನಿಯಮ (ಎನ್.ಆರ್.ಇ.ಜಿ.ಎ.) ವು ಒಂದು ಅಭೂತ ಪೂರ್ವ ಅಧಿನಿಯಮ. ೭೩ನೇ ಸಂವಿಧಾನದ ತಿದ್ದುಪಡಿಯಂತೆ ಆರ್ಥಿಕ ವಿಕಾಸ ಹಾಗೂ ಸಾಮಾಜಿಕ ನ್ಯಾಯ ಪಡೆಯುವುದು ಪಂಚಾಯಿತಿಗಳ ಮೂಲಭೂತ ಹಕ್ಕಾಗಿದ್ದು, ಅವುಗಳ ಪಾತ್ರವನ್ನು ಈ ಅಧಿನಿಯಮವು ಮಾನ್ಯತೆ ಮಾಡಿದೆ. ರಾ.ಗ್ರಾ.ಉ.ಖಾ. ಅಧಿನಿಯಮದ ಅನುಷ್ಠಾನದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳನ್ನು ಪ್ರಧಾನ ಕಾರ್ಯಸ್ಥರನ್ನಾಗಿ ಗುರುತಿಸುವುದರಿಂದ ಅಭಿವೃದಿ ವಿಕೇಂದ್ರೀಕರಣಗಳ ಬಹಳಷ್ಟು ಅವಕಾಶಕ್ಕೆ ಬಾಗಿಲು ತೆರೆಯುವುದಲ್ಲದೆ ಸ್ಥಳೀಯ ಬದುಕಿನ ಸಮಸ್ಯೆಗಳಿಗೆ ಸ್ಥಳೀಯವಾದ ಪರಿಹಾರವನ್ನು ಕಂಡುಕೊಳ್ಳಲು ಅವಕಾಶ ಮಾಡಿದೆ. ಕೆಲವು ಆಯ್ದ ಜಿಲ್ಲೆಗಳಲ್ಲಿ ಈ ಅಧಿನಿಮವು ಎರಡು ವರ್ಷಗಳ ಅನುಷ್ಠಾನ ಪೂರೈಸಿದ್ದು, ಏಪ್ರಿಲ್ ೨೦೦೮ ರಿಂದ ಉಳಿದ ಜಿಲ್ಲೆಗಳಿಗೂ ವಿಸ್ತರಿಸಲಾಗಿದೆ.

**೩.೧ ಅಧಿನಿಯಮದ ಪ್ರಮುಖ ಲಕ್ಷಣಗಳು :**

೧. ಪ್ರತಿವಾರಲ್ಲಿಯೇ ಕೂಲಿ ಸಂದಾಯವಾಗಬೇಕು. ಯಾವುದೇ ಕಾರಣಕ್ಕೂ ಎರಡು ವಾರಗಳನ್ನು ಮೀರಬಾರದು.

೨. ಕೂಲಿಯ ಸಂದಾಯದಲ್ಲಿ ವಿಳಂಬವಾದಲ್ಲಿ ಕೂಲಿ ಸಂದಾಯ ಅಧಿನಿಯಮದನ್ವಯ ಕೂಲಿಕಾರರು ಪರಿಹಾರ ಪಡೆಯಲು ಹಕ್ಕುಳ್ಳುವರಾಗಿರುವರು.

೩. ಇದರಲ್ಲಿ ಯಾವುದೇ ಲಿಂಗ ತಾರತಮ್ಯಕ್ಕೆ ಅವಕಾಶವಿರುವುದಿಲ್ಲ.

೪. ಅಪಘಾತವಾದಲ್ಲಿ ಪರಿಹಾರಕ್ಕೆ ಹಾಗೂ ಬಯಲಕ್ಕು ಚಿರ್ಡ್ಲಖಿ, ಕೆಲಸದ ಜಾಗದಲ್ಲಿ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ವಿಶ್ರಾಂತಿಗೆ ಸಮಯ ಹಾಗೂ ಪ್ರಥಮ ಚಿಕಿತ್ಸೆ ಸಹಾಯದ ವ್ಯವಸ್ಥೆಗಳನ್ನು ಕಲ್ಪಿಸಲಾಗಿದೆ.

೫. ಕಂಟ್ರಾಕ್ಟರ್‌ಗಳು ಹಾಗೂ ಕೂಲಿ ಕುಂಠಿತ ಮಾಡುವ ಯಂತ್ರಗಳ ಬಳಕೆಗೆ ಅವಕಾಶವಿರುವುದಿಲ್ಲ.

೬. ಯಾವುದೇ ಯೋಜನೆಯಡಿ ಕನಿಷ್ಠ ಶೇ ೬೦ ರಷ್ಟು ವೆಚ್ಚವು ಕೂಲಿಯ ಮೇಲಿನದಾಗಿರಬೇಕು.

೭. ಮೌಲ್ಯಾಧಾರಿತ ಕನಿಷ್ಠ ಶೇಕಡ ೫೦ ರಷ್ಟು ಯೋಜನೆಗಳನ್ನು ಗ್ರಾಮ ಪಂಚಾಯತ್‌ಗಳ ಮೂಲಕ ಅನುಷ್ಠಾನಗಳಿಸಬೇಕು. ಈ ಬಗ್ಗೆ ಒಂದು ಅಭಿವೃದಿ ಯೋಜನಾ ಪಟ್ಟಿಯನ್ನು ತಯಾರಿಸಬೇಕು.

೮. ಬ್ಲಾಕ್ ಮಟ್ಟದಲ್ಲಿ ಯೋಜನಾಧಿಕಾರಿಯು ಉದ್ಯೋಗ ಭರವಸೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಜವಾಬ್ದಾರರಾಗಿರುವರು.

ಈ ಕಾರ್ಯಕ್ರಮದ ಸಾಫಲ್ಯ ಪರಿಣಾಮವು ಏಕಕಾಲದಲ್ಲಿ ಹಳೆಯ ನಿರುದ್ಯೋಗದ ಹಾಗೂ ಬಡತನದ ಸಮಸ್ಯೆಯನ್ನು ಕಡಿಮೆ ಮಾಡುವುದರೊಂದಿಗೆ ಸಾಮಾನ್ಯ ಗ್ರಾಮೀಣ ಜನರ ಉತ್ಪಾದನಾ ಶಕ್ತಿಯನ್ನು ನೈಸರ್ಗಿಕ ಆಸ್ತಿಯನ್ನಾಗಿ ಮಾರ್ಪಡಿಸುವದರಲ್ಲಿದೆ. ಈ ಅಧಿನಿಯಮವು ಜಲಾನಯನ ಅಭಿವೃದಿ, ಜಲಮೂಲಗಳಾದ ಕೆರೆ ಕಾಲುವೆಗಳ ಪುನರುತ್ಥಾನ, ಅರಣ್ಯೀಕರಣದ ಚಟುವಟಿಕೆಗಳು, ಭೂಮಿ ಅಭಿವೃದಿ, ಪ್ರವಾಹ ಮತ್ತು ಭೂ ಸವಕಳಿ ತಡೆಯುವಂತಹ ಮುಖ್ಯ ಚಟುವಟಿಕೆಗಳಿಂದ, ಗ್ರಾಮೀಣ ಮೂಲ ಸೌಲಭ್ಯಗಳನ್ನು ನಿರ್ಮಿಸಲು ಅವಕಾಶ ಮಾಡುವುದರೊಂದಿಗೆ ರಸ್ತೆಗಳ ನಿರ್ಮಾಣ ಹಾಗೂ ಸಂಸ್ಥೆಗಳ ಸೌಕರ್ಯಗಳನ್ನು ಒದಗಿಸಲು ಅನುವು ಮಾಡುತ್ತದೆ. ಆದಾಗ್ಯೂ, ರಸ್ತೆ ನಿರ್ಮಾಣವು ಕೊನೆಯ ಆದ್ಯತೆಯಲ್ಲಿದ್ದು, ಕನಿಷ್ಠ ಯೋಜನೆಗಳನ್ನು ಹೊಂದುರುತ್ತದೆ. ಕಾನೂನು ರೀತ್ಯ ಕನಿಷ್ಠ ಕೂಲಿಗೆ ಕೌಶಲ್ಯವಲ್ಲದ ಮಾನವ ಆಧಾರಿತ ಕೂಲಿ ಮಾಡಲು ಆಸಕ್ತಿಯುಳ್ಳ ಯಾರೊಬ್ಬರು ಸಹ ಬೇಡಿಕೆ ಮಾಡಬಹುದಾಗಿದ್ದು, ಇದನ್ನು ೧೫ ದಿನಗಳೊಳಗೆ ಸ್ಥಳೀಯ ಆಡಳಿವು ಪೂರೈಸಬೇಕು ತಪ್ಪಿದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ನೀಡಬೇಕಾಗುತ್ತದೆ.

**೩.೨ ನಾಗರೀಕರ ಹಕ್ಕುಗಳು :**

೧. ಕಾನೂನು ರೀತ್ಯ ಕೂಲಿಯಲ್ಲಿ ಕೈಕೆಲಸ ಮಾಡಲು ಆಸಕ್ತಿಯುಳ್ಳ ಯಾವುದೇ ಗ್ರಾಮೀಣ ವಯಸ್ಕರು ಗ್ರಾಮ ಪಂಚಾಯತ್‌ಗಳಲ್ಲಿ ಹೆಸರು ನೋಂದಾಯಿಸಲು ಅರ್ಜಿ ಹಾಕಬಹುದು.

೨. ನೋಂದಣಿಯು ಐದು ವರ್ಷಗಳ ಅವಧಿಗೆ ಕಡಿಮೆಯಿಲ್ಲದಂತೆ ಚಲಾವಣೆಯಲ್ಲಿರುತ್ತದೆ. ಇದನ್ನು ನಂತರ ನವೀಕರಿಸಬಹುದಾಗಿದೆ.

೩. ನೋಂದಾಯಿಸಿದ ಪ್ರತಿಯೊಬ್ಬರಿಗೂ ಅರ್ಜಿ ಸಲ್ಲಿಸಿದ ೧೫ ದಿನಗಳೊಳಗಾಗಿ ಉದ್ಯೋಗವನ್ನು ಒದಗಿಸಬೇಕು.

೪. ಅರ್ಜಿಯಲ್ಲಿ ಕನಿಷ್ಠ ೧೪ ದಿನಗಳ ಸತತ ಉದ್ಯೋಗಕ್ಕೆ ಕೋರಿಕೆ ಇರಬೇಕು.

೫. ಸರಿಯಾದ ಅರ್ಜಿಗಳನ್ನು ಸ್ವೀಕರಿಸಲು ಮತ್ತು ದಿನಾಂಕವನ್ನು ಒಳಗೊಂಡ ಅರ್ಜಿ ಸ್ವೀಕೃತಿ ನೀಡಲು ಗ್ರಾಮ ಪಂಚಾಯಿತಿಯೇ ಅಧಿಕಾರಯುಕ್ತವಾಗಿರುತ್ತದೆ.

೬. ಉದ್ಯೋಗ ನೀಡುವ ಬಗ್ಗೆ ನೋಟೀಸ್ ಮೂಲಕ ಪ್ರಕಟಿಸಬೇಕು.

೭. ೫ ಕಿ.ಮೀ. ಗಳ ಅಂತರದೊಳಗೆ ಕೆಲಸ ನೀಡಬೇಕು. ಕೆಲಸವನ್ನು ೫ ಕಿ.ಮೀ. ಹೊರಗೆ ನೀಡಿದಲ್ಲಿ, ಅದು ಬ್ಲಾಕ್ ಒಳಗೆ ಇರಬೇಕು ಮತ್ತು ದಿನಗೂಲಿಯ ಶೇ ೧೦ ರಷ್ಟು ಹೆಚ್ಚುವರಿಯಾಗಿ ಕೂಲಿ ನೀಡಬೇಕು.

ಆದಾಗ್ಯೂ, ಕಾನೂನೊಂದೇ ಉದ್ಯೋಗ ಖಾತರಿ ನೀಡುವುದಿಲ್ಲ ಹಾಗಾಗಿ ಸತತವಾಗಿ ಸಜ್ಜಾಗಿರುವದರ ಅಗತ್ಯತೆ ಇದೆ ಎಂಬುದನ್ನು ಜ್ಞಾಪಕದಲ್ಲಿಡಬೇಕು. ಅಧಿನಿಯಮವು ಉದ್ಯೋಗ ಭರವಸೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಗ್ರಾಮ ಸಭೆಗಳು, ಸಾಮಾಜಿಕ ಜವಾಬ್ದಾರಿಯ ಹೊಣೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಯೋಜನೆ ನಿರೂಪಿಸುವಲ್ಲಿ ಸಾರ್ವಜನಿಕರು ಪ್ರಮುಖ ಪಾತ್ರ ವಹಿಸಲು ಅಧಿಕಾರ ನೀಡುತ್ತದೆ.

**೩.೩ ಅನುಷ್ಠಾನದ ಸಮಸ್ಯೆಗಳು :**

೧. ಜೀವನ ಭದ್ರತೆ ಹೊಂದಿದ ಕೆಲಸ ನೀಡುವಂತಹ ಕಾಮಗಾರಿಗಳ ಅಪೂರ್ಣ ಮಾಹಿತಿ ಅಂದರೆ ಅಂದಾಜು ಮಾಡುವುದರ ಕೊರತೆ.

೨ ಪ್ರಸ್ತುತ ಬೇಡಿಕೆಯಲ್ಲಿರುವ ಕೆಲಸಗಳು / ಕಾಮಗಾರಿಗಳನ್ನು ಯುಕ್ತವಾಗಿಸುವಲ್ಲಿ ಕೊರತೆ.

೩ ಮೂಲ ಉದ್ದೇಶದ ಕಡಿಮೆ ಜ್ಞಾನ, ಕಡಿಮೆ ಕೂಲಿ, ಗ್ರಾಮ ಸಭೆಗಳಲ್ಲಿ ಹಾಜರಾತಿ ಕೊರತೆ.

೪ ತ್ರಾಸದಾಯಕ ಕೆಲಸದ ಸ್ಥಳಗಳು, ಕಡಿಮೆ ಕೂಲಿ ಸಂದಾಯ, ಸಾಮಾಜಿಕ ಭದ್ರತೆ ಮಾನದಂಡಗಳನ್ನು ಪಾಲಿಸದಿರುವುದು.

೫ ಗ್ರಾಮ ಪಂಚಾಯತ್ ಮಟ್ಟದಲ್ಲಿ ಸಾಕಷ್ಟು ಆಡಳಿತಾತ್ಮಕ ವಿಧಾನಗಳಲ್ಲದಿರುವುದು. ರಾ.ಉ.ಖಾ. ಅಧಿನಿಯಮವನ್ನು ಕಾರ್ಯಗತಗೊಳಿಸುವಲ್ಲಿ ಗ್ರಾಮ ಪಂಚಾಯಿತಿಗಳ ಪಾತ್ರ.

೬ ಪಂಚಾಯತ್‌ಗಳಲ್ಲಿ ಅಭಿವೃದಿ ಕಾರ್ಯಕ್ರಮ ತಯಾರಿಕೆ ಮತ್ತು ಗ್ರಾಮ ಸಭೆ ಮಂಜೂರಾತಿಯೊಂದಿಗೆ ಎನ್‌ಆರ್‌ಇಜಿಎ ಯೋಜನೆಯಡಿ ತೆಗೆದುಕೊಳ್ಳಬಹುದಾದ ಕಾರ್ಯಕ್ರಮಗಳ ಪಟ್ಟಿ ಮಾಡುವುದು.

೭ ಕುಟುಂಬಗಳ ನೋಂದಣಿ ಮತ್ತು ಕೆಲಸ ಅನುಮತಿ ಪತ್ರಗಳ ಹಂಚಿಕೆ.

೮ ಕೆಲಸ ಕೋರಿದ ಅರ್ಜಿಗಳನ್ನು ಸ್ವೀಕರಿಸುವುದು ಮತ್ತು ಉದ್ಯೋಗ ನಿಡುವುದು;

೯ ಯೋಜನಾ ಕಚೇರಿಯಿಂದ ಮಂಜೂರಾದಂತಹ ಅಭಿವೃದಿ ಕಾರ್ಯಕ್ರಮದ ಪಟ್ಟಿಯ ಕೆಲಸಗಳನ್ನು ಅನುಷ್ಠಾನಗೊಳಿಸುವುದು;

೧೦ ಕೆಲಸಗಾರರ ಪಟ್ಟಿ ತಯಾರಿಸುವುದು ಮತ್ತು ಎನ್‌ಆರ್‌ಇಜಿಎಸ್ ಅಡಿ ಪಂಚಾಯಿತಿ ಲೆಕ್ಕದಲ್ಲಿ ಪಡೆದ ಅನುದಾನವನ್ನು ಹಂಚಿಕೆ ಮಾಡುವುದು:

೧೧ ಮಂಜೂರಾದ ಕಾಮಗಾರಿಗಳಲ್ಲಿ ಕನಿಷ್ಠ ಶೇ. ೫೦ ಭಾಗದಷ್ಟು ಕೆಲಸಗಳನ್ನು ಗ್ರಾಮ ಪಂಚಾಯತ್‌ಗಳಿಂದ ಹಾಗೂ ಉಳಿದ ಶೇ. ೫೦ ರಷ್ಟನ್ನು ಇತರೆ ಏಜನ್ಸಿಗಳಿಂದ ಕಾರ್ಯಗತಗೊಳಿಸುವುದು.

ಕರ್ನಾಟಕ ಗ್ರಾಮೀಣ ಜನತೆ ಈ ಅಧಿನಿಯಮದಡಿ ಬರುವ ಯೋಜನೆಗಳ ಸಾಫಲ್ಯ ಪಡೆಯುವತ್ತ ಗಮನ ಹರಿಸಬೇಕು.

**೩.೪ ಗ್ರಾಮಸಭೆ : (ನಿಯಮ-೩ಎ)**

ಎಲ್ಲಾ ವಾರ್ಡ್ ಸಭೆಗಳು ಮುಗಿದ ನಂತರ, ಗ್ರಾಮ ಸಭೆಯನ್ನು ಸಂಘಟಿಸುವುದು. ಎಲ್ಲಾ ವಾರ್ಡ್‌ಗಳ ಚುನಾಯಿತ ಪ್ರತಿನಿಧಿಗಳು, ಕ್ಷೇತ್ರ ಮಟ್ಟದ ಇಲಾಖಾ ಸಿಬ್ಬಂದಿಗಳು, ಕಾರ್ಯತಂಡದ ಸದಸ್ಯರು ಹಾಗೂ ಜನರು ಭಾಗವಹಿಸುವುದನ್ನು ಖಾತರಿಪಡಿಸಿಕೊಳ್ಳಬೇಕು. ಗ್ರಾಮಸಭೆಯಲ್ಲಿ ಕಾರ್ಯ ತಂಡಗಳು ವರದಿ ಸಿದಪಡಿಸಲು ನಡೆಸಿದ ಚಟುವಟಿಕೆ ಮತ್ತು ವಿಧಾನಗಳನ್ನು ವಿವರಿಸಬೇಕು. ವಸತಿ/ವಾರ್ಡ್ ಸಭೆಗಳ ಮೂಲಕ ಗುರುತಿಸಲಾದ ವಾಸ್ತವ ಸ್ಥಿತಿ ಹಾಗೂ ಬೇಡಿಕೆಗಳ ಆದ್ಯತೆಗಳನ್ನು ಗ್ರಾಮಸಭೆಯಲ್ಲಿ ಮಂಡಿಸಬೇಕು. ಆದ್ಯತೆಗಳನ್ನು ಗುರುತಿಸಲು ಬಳಸಲಾದ ವಿಧಾನ ಹಾಗೂ ಮಾನದಂಡವನ್ನು ಗ್ರಾಮಸಭೆಗೆ ವಿವರಿಸಬೇಕು. ಬಳಿಕ ಜನರ ಸಲಹೆ, ಅಭಿಪ್ರಾಯಗಳನ್ನು ಸ್ವೀಕರಿಸುವುದು ಹಾಗೂ ಚರ್ಚೆಗೆ ಮುಕ್ತ ಅವಕಾಶ ಕಲ್ಪಸಬೇಕು.

ವಾರ್ಡ್‌ವಾರು, ವಲಯವಾರು ಮತ್ತು ವರ್ಷವಾರು ಸಿದ್ಧಪಡಿಸಿ ಮಂಡಿಸಲಾದ ಬೇಡಿಕೆಗಳು ಮತ್ತು ಆದ್ಯತೆಗಳ ವರದಿಯ ಮೇಲೆ, ಮುಕ್ತ ಚರ್ಚೆಗೆ ಅವಕಾಶ ನೀಡಿ ಜನರ ಸಲಹೆಗಳ ಸೇರ್ಪಡೆಗೆ ಅವಕಾಶವಿರಬೇಕು. ಹಾಗೆಯೇ ಜನಾಭಿಪ್ರಾಯದ ಮೇರೆಗೆ ರದತಿಗೂ ಅವಕಾಶ ನೀಡಬೇಕು. ಗ್ರಾಮಸಭೆಯ ಚರ್ಚೆ, ಸಲಹೆಗಳ ನಂತರ ಒಪ್ಪಿಗೆ ನೀಡಲಾದ ವಲಯವಾರು ವರದಿಯನ್ನು ಕಾರ್ಯತಂಡಗಳು ಅಂತಿಮಗೊಳಿಸಬೇಕು. ಅಂತಿಮವಾಗಿ ರೂಪುಗೊಂಡು ಯೋಜನಾ ಪ್ರಸ್ತಾವನೆಯನ್ನು, ಗ್ರಾಮ ಪಂಚಾಯಿತಿ ಸಾಮಾನ್ಯ ಸಭೆಯಲ್ಲಿ ಅಂಗೀಕರಿಸುವುದು ಅಂಗೀಕೃತ ಪ್ರಸ್ತಾವನೆಯನ್ನು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ ಹಾಗೂ ಜಿಲ್ಲಾ ಯೋಜನಾ ಸಮಿತಿಗೆ ಕಳುಹಿಸಬೇಕು.

**೩.೫ ಯೋಜನೆಯ ಸಮಸ್ಯೆಗಳು ಮತ್ತು ಅಧ್ಯಯನದ ಫಲಿತಾಂಶಗಳು :**

ಈ ಮೇಲಿನ ಎಲ್ಲಾ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ (ಎಮ್.ಓ.ಆರ್.ಡಿ.) ಅಧ್ಯಯನ ಮಾಡಿ ವೈಫಲ್ಯಗಳನ್ನು ಗುರುತಿಸಿದೆ.

ಮಾಹಿತಿಯ ಕೊರತೆ ಅಂದರೆ ಜನರ ಪಾಲ್ಗೊಳ್ಳುವಿಕೆಯ ಕೊರತೆ, ಸಮಗ್ರವಾದ ಯೋಜನೆಗಳನ್ನು ರೂಪಿಸದೆ ಇರುವುದು, ಕಳಪೆ ಗುಣಮಟ್ಟದ ಆಸ್ತಿಗಳ ನಿರ್ಮಾಣ, ನಕಲಿ ವರದಿಗಳು / ನಕಲಿ ಹಾಜರಾತಿಯ ದಾಖಲಾತಿ, ವೇತನ ಪಾವತಿಯನ್ನು ಸರಿಯಾಗಿ ಮಾಡದೇ ಇರುವುದು, ನಿಗದಿಗಿಂತ ಕಡಿಮೆ ವೇತನ ನೀಡಿರುವುದು, ಮಹಿಳೆಯರಿಗೆ ಪುರುಷರಿಗಿಂತ ಕಡಿಮೆ ವೇತನ ನೀಡಿರುವುದು, ಗುತ್ತಿಗೆ ನೀಡಿರುವುದು, ಯಂತ್ರಗಳನ್ನು ಬಳಸಿ ಕಾಮಗಾರಿ ಮಾಡಿರುವುದು, ಯಾವ ಉದ್ದೇಶಕ್ಕೆ ಅನುದಾನವನ್ನು ನೀಡಲಾಗಿತ್ತೋ, ಅದಕ್ಕೆ ಬಳಸದೆ ಬೇರೆ ಉದ್ದೇಶಕ್ಕೆ ಅನುದಾನವನ್ನು ಬಳಸಿಕೊಂಡಿರುವುದರಿಂದ ನಿರೀಕ್ಷಿತ ಯಶಸ್ಸನ್ನು ಪಡೆಯಲು ಸಾಧ್ಯವಾಗಲಿಲ್ಲ. ಉದ್ದೇಶಕ್ಕೆ ವ್ಯತಿರಿಕ್ತವಾಗಿ ಅನುದಾನದ ಬಳಕೆ, ಮೇಲಾಧಿಕಾರಿಗಳು ಸರಿಯಾಗಿ ಕಾಮಗಾರಿಗಳನ್ನು

ಮೇಲ್ವಿಚಾರಣೆ ಮಾಡದೇ ಇರುವುದು, ಮೇಲಿನ ಅಧಿಕಾರಗಳಿಗೆ ಸಂಪೂರ್ಣ ಮಾಹಿತಿ ನೀಡದೇ ಇರುವುದು, ಅನುಷ್ಠಾನ ಸಂಸ್ಥೆಗಳಿಗೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ತರಬೇತಿ ಮೂಲಕ ಸಾಮರ್ಥ್ಯ ವೃದಿಸದೇ ಇರುವುದು, ಏಕಕಾಲದಲ್ಲಿ ಒಂದೇ ಯೋಜನೆಗಳನ್ನು ಬೇರೆ ಬೇರೆ ಸಂಸ್ಥೆಗಳಿಂದ ಜಾರಿಗೊಳಿಸಿ ಹಣ ದುರುಪಯೋಗ ಮಾಡಿಕೊಂಡಿರುವುದು, ಅನುತ್ಪಾದಕಗಳಿಗೆ ಹೆಚ್ಚು ಒತ್ತು ನೀಡಿರುವುದು, ಸಮಾನಾಂತರವಾಗಿ ಏಕಕಾಲದಲ್ಲಿ ಹಲವು ಉದ್ಯೋಗ ಭರವಸೆ ಯೋಜನೆಗಳ ಅನುಷ್ಠಾನ ಮಾಡಿವುದು, ಪಾರದರ್ಶಕತೆ ಮತ್ತು ಸಮುದಾಯದ ಉತ್ತರದಾಯಿತ್ವದ ಕೊರತೆ ಹಾಗೂ ಇನ್ನೂ ಅನೇಕ ಕಾರಣಗಳಿಂದ ಸ್ವಾತಂತ್ರ್ಯಾ ನಂತರದಲ್ಲಿ ಜಾರಿಗೆ ಬಂದ ಉದ್ಯೋಗ ಭರವಸೆ ಕಾರ್ಯಕ್ರಮಗಳಿಗೆ ತೊಡಕುಗಳು ಹಾಗೂ ವೈಫಲ್ಯಗಳೆಂದು ಗುರುತಿಸಲಾಗಿದೆ. ಈ ಹಿಂದಿನ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಆಗಿರುವ ಅಂತಹುದೇ ತಪ್ಪುಗಳು ಮರುಕಳಿಸದಂತೆ ಎಚ್ಚರ ವಹಿಸಬೇಕಾಗಿದೆ.

ಈ ಮೇಲಿನ ಅನುಭವಗಳ ಹಿನ್ನೆಲೆಯಲ್ಲಿ ಅಧ್ಯಯನಗಳ ವರದಿ; ಕಾರ್ಯಕ್ರಮಗಳ ಪರಿಷ್ಕರಣೆ ವಿಚಾರ ಸಂಕೀರಣಗಳ ನಂತರ ಇದೇ ಮೊದಲ ಬಾರಿಗೆ ಕಾಯಿದೆ ರೂಪದಲ್ಲಿ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ ೨೦೦೫" ನ್ನು ರಾಷ್ಟ್ರದ ೨೦೦ ಜಿಲ್ಲೆಗಳಲ್ಲಿ ೨೦೦೬-೦೭ ರ ಆರ್ಥಿಕ ವರ್ಷದಿಂದ ಜಾರಿಗೆ ತರಲಾಗಿದೆ. ಪ್ರಸಕ್ತ ಆರ್ಥಿಕ ವರ್ಷದಿಂದ ದೇಶದ ಎಲ್ಲಾ ಜಿಲ್ಲೆಗಳು ಅಧಿನಿಯಮದ ವ್ಯಾಪ್ತಿಗೆ ಒಳಪಟ್ಟಿದೆ.

ವಿವಿಧ ವಲಯಗಳಲಿ ೧೧ ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ಅನುಷ್ಠಾನಗೊಳಿಸಬಹುದಾದ ಅಭಿವೃದಿ ಮುನ್ನೋಟಕ್ಕೆ ಪ್ರಸ್ತಾವನೆಗಳನ್ನು ದಾಖಲಿಸುವುದು.

- ೧೧ ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ವಿವಿಧ ವಲಯಗಳಿಗೆ ಸಂಬಂಧಪಟ್ಟ ಗ್ರಾಮ ಪಂಚಾಯಿತಿ ಅಧಿಕಾರ ವ್ಯಾಪ್ತಿಯಲಿ ಅನುಷ್ಠಾನಗೊಳಿಸಬಹುದಾದ ಅಭಿವೃದಿ ಕಾರ್ಯಕ್ರಮಗಳು ಹಾಗೂ ಅನುದಾನದ ಮೂಲಗಳ ವಿವರಗಳನ್ನು ನಮೂದಿಸುವುದು.
- ಅಭಿವೃದಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವರ್ಷ ಯಾವುದು ಅಂದರೆ ವರ್ಷವಾರು ವಿಂಗಡನೆ ಮಾಡಲಾದ ವಿವರಗಳನ್ನು ದಾಖಲಿಸುವುದು.
- ೧೧ ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ವಿವಿಧ ವಲಯಗಳಿಗೆ ಸಂಬಂಧಪಟ್ಟ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಅಧಿಕಾರ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸಬಹುದಾದ ಅಭಿವೃದಿ ಕಾರ್ಯಕ್ರಮಗಳು ಹಾಗೂ ಅನುದಾನದ ಮೂಲಗಳ ವಿವರಗಳನ್ನು ನಮೂದಿಸುವುದು.
- ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವರ್ಷವಾರು/ ವಲಯವಾರು ಕಾಮಗಾರಿಗಳ ವಿವರಗಳನ್ನು ನಮೂದಿಸುವುದು.

ವಿವಿಧ ವಲಯಗಳಿಗೆ ಸಂಬಂಧಪಟ್ಟ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಿಳ ವ್ಯಾಪ್ತಿಗೆ ಬರದೆ ಸರ್ಕಾರದ ಮಟ್ಟದಲ್ಲಿ ನಿರ್ಧಾರವಾಗಬೇಕಾದ ಅಭಿವೃದಿ ಕಾರ್ಯಕ್ರಮಗಳಿಗೆ ಪ್ರಸ್ತಾವನೆಗಳ ವಿವರಗಳನ್ನು ನಮೂದಿಸುವುದು.

ಸುಧಾರಣಾ ಕ್ರಮಗಳು : ಪ್ರಗತಿ ಪರಿಶೀಲನಾ ವಿವರಗಳು, ಸಲಹೆ, ಸೂಚನೆಗಳು, ಜವಾಬ್ದಾರಿಗಳು ಸಂಪನ್ಮೂಲಗಳ ಹೆಚ್ಚಳಕ್ಕೆ ತೆಗೆದುಕೊಳ್ಳುವ ಕ್ರಮಗಳ ಬಗ್ಗೆ

- ಗುಣಮಟ್ಟದ ಆಸ್ತಿಗಳ ನಿರ್ಮಾಣದಲ್ಲಿ ವಹಿಸುವ ಮೇಲ್ವಿಚಾರಣೆ ಬಗ್ಗೆ
- ಆಡಳಿತ ವ್ಯವಸ್ಥೆಯ ಸುಧಾರಣೆಯಲ್ಲಿ ತೆಗೆದುಕೊಳ್ಳುವ ಮುಂಜಾಗ್ರತಾ ಕ್ರಮಗಳು
- ಪಾರದರ್ಶಕ ಆಡಳಿತಕ್ಕೆ ಹೆಚ್ಚು ಒತ್ತು ನೀಡುವ ಸುಧಾರಣಾ ಕ್ರಮಗಳ ಬಗ್ಗೆ ವಿವರ ನೀಡಬೇಕು

**೩.೬ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ ಮತ್ತು ಫಲಿತಾಂಶಗಳು :**

ಎರಡು ವರ್ಷಗಳ ಜಾರಿಯ ಅವಧಿಯಲ್ಲಿ ಸ್ವಯಂ ಗುರಿಯುಳ್ಳ ಹಕ್ಕೊತ್ತಾಯ ಆಧಾರದ ರೂಪವುಳ್ಳ ಕಾರ್ಯಕ್ರಮ ಎಂಬುದನ್ನು ಈ ಯೋಜನೆಯು ತೋರಿಸಿದೆ. ಹಾಗೆಯೇ ಈ ಉದ್ಯೋಗದ ಸ್ವರೂಪ, ಋತುಕಾಲಿಕ ಮತ್ತು ಉದ್ಯೋಗದ ಅವಧಿಯು ಚಾಲ್ತಿಯಲ್ಲಿರುವ ಉದ್ಯೋಗಾವಕಾಶಗಳ ಅನ್ವಯ ಇರುತ್ತದೆ. ಜೊತೆಗೆ ಸ್ಥಳೀಯ ಕೃಷಿ ಪದ್ಧತಿಗಳನ್ವಯ ಮತ್ತು ಉದ್ಯೋಗದ ಪರ್ಯಾಯ ಬಗೆಗಳ ಅನ್ವಯ ಒದಗಿಸಲಾಗುತ್ತದೆ. ಉದ್ಯೋಗ ಚೀಟಿ ಹೊಂದಿರುವ ಎಲ್ಲ ಕುಟುಂಬಗಳು ಕಡ್ಡಾಯ ನೂರು ದಿನಗಳ ಪೂರ್ಣ ಉದ್ಯೋಗಕ್ಕೆ ಮನವಿ ಸಲ್ಲಿಸಬೇಕು ಎಂದೇನೂ ಇಲ್ಲ.

ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕೆಲಸಗಾರರ ಭಾಗವಹಿಸುವಿಕೆಯಲ್ಲಿ ಅಂತರ್‌ರಾಜ್ಯ ಮತ್ತು ಅಂತರ್‌ಜಿಲ್ಲಾ ಏರು-ಪೇರುಗಳನ್ನು ಕಾಣಬಹುದಾಗಿದೆ. ಎಲ್ಲ ಜಿಲ್ಲೆಗಳಲ್ಲೂ ಒಂದೇ ತೆರನಾದ ಕಾರ್ಯ, ಗಾತ್ರ ಮತ್ತು ಕಾರ್ಮಿಕರ ಪ್ರಮಾಣದ ಅಗತ್ಯತೆ ಇರುವದಿಲ್ಲ. ಕಾಯ್ದೆಯ ಅನುಷ್ಠಾನಗೊಂಡ ಮೊದಲ ಹಂತದ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಆಧಾರದ ಮೇಲೆ ೧೫೦ ಜನರನ್ನು ಆಯ್ಕೆ ಮಾಡಲಾಯಿತು. ಈ ಜಿಲ್ಲೆಗಳಲ್ಲಿ ಉದ್ಯೋಗಕ್ಕಾಗಿ ಬೇಡಿಕೆ ಸಲ್ಲಿಸುವವರ ಸಂಖ್ಯೆ ಹೆಚ್ಚಾಗಿತ್ತು. ಹೆಚ್ಚು ಅಭಿವೃದ್ಧಿ ಹೊಂದಿದ ಜಿಲ್ಲೆಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯಡಿ ಉದ್ಯೋಗಕ್ಕೆ ಹಕ್ಕೊತ್ತಾಯ ಮಾಡುವವರ ಸಂಖ್ಯೆ ಸ್ವಲ್ಪ ಕಡಿಮೆಯೇ ಇದ್ದು ಕೃಷಿ ಮತ್ತು ಗ್ರಾಮೀಣ ಕೃಷಿಯೇತರ ಚಟುವಟಿಕೆಗಳಲ್ಲಿ ಉದ್ಯೋಗಾವಕಾಶಗಳು ಹೆಚ್ಚಾಗಿವೆ. ಈ ರೀತಿಯಾಗಿ ಅತೀ ಶೋಷಿತ ಪ್ರದೇಶಗಳಲ್ಲಿ ಹೆಚ್ಚಿನ ಉದ್ಯೋಗಾವಕಾಶ ಕಲ್ಪಿಸುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಬಡತನ ನಿವಾರಣೆಯನ್ನು ನೇರವಾಗಿಯೇ ಕೈಗೆತ್ತಿಕೊಳ್ಳುವುದು ಕಾಣುತ್ತದೆ. ೨೦೦೮ ರ ಜನೇವರಿ ಮಧ್ಯಭಾಗದವರೆಗೆ ದೊರೆತಿರುವ ಗಮನಾರ್ಹ ಪರಿಣಾಮ ಈ ರೀತಿಯಾಗಿವೆ.

**ಗ್ರಾಮೀಣ ಕೆಲಸಗಾರರಿಗೆ ಹೆಚ್ಚಿದ ಉದ್ಯೋಗಾವಕಾಶಗಳು :**

ಕಾರ್ಯಕ್ರಮ ಅನುಷ್ಠಾನ ಪ್ರವೃತ್ತಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ಮುಖ್ಯ ಉದ್ದೇಶವನ್ನು ಸ್ಪಷ್ಟಪಡಿಸುತ್ತವೆ. ೨೦೦೬-೦೭ ರಲ್ಲಿ ೨೦೦ ಜಿಲ್ಲೆಗಳಲ್ಲಿ ಒಟ್ಟು ೯೦.೫ ಕೋಟಿ ಕೆಲಸದ ದಿನಗಳನ್ನು ಸೃಷ್ಟಿಸಲಾಯಿತು. ಪ್ರಸಕ್ತ ಆರ್ಥಿಕ ವರ್ಷದಲ್ಲಿ ಫೆಬ್ರುವರಿವರೆಗೆ ೩೩೦ ಜಿಲ್ಲೆಗಳಲ್ಲಿ ೧೧೯.೭೮ ಕೋಟಿ ಕೆಲಸದ ದಿನಗಳನ್ನು ಒದಗಿಸಲಾಗಿದೆ. ಎಸ್.ಜಿ.ಆರ್.ವಾಯ್. ನಲ್ಲಿ ಇಡೀ ದೇಶದಲ್ಲೇ ಸರಾಸರಿಯಾಗಿ ೮೫ ಕೋಟಿ ಕೆಲಸದ ದಿನಗಳನ್ನು ಸೃಷ್ಟಿಸಲಾಗಿದ್ದು ಈ ಕಾಯ್ದೆಯಡಿ ಸೃಷ್ಟಿಯಾಗಿರುವ ಕೆಲಸದ ದಿನಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಳ ಸಾಧಿಸಿವೆ.

**೧. ಅಂತರ್ವಿಷ್ಟ ಬೆಳವಣಿಗೆ :**

ಗ್ರಾಮೀಣ ಬಡವರಿಗೆ ತಲುಪುವುದು :- ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಒದಗಿಸಲಾದ ಉದ್ಯೋಗ ಶೇ. ೧೧೭.೫೪ ಆಗಿದ್ದು ಇದು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ ಬಡವರನ್ನು ತಲುಪುವುದನ್ನು ತೋರಿಸುತ್ತದೆ. ೨೦೦೬-೦೭ ರಲ್ಲಿ ಈ ಪ್ರಮಾಣ ೧೨೭% ೨೦೦೭-೦೮ ರ ಫೆಬ್ರುವರಿವರೆಗೆ ಒಟ್ಟು ಪ್ರಮಾಣ ೧೧೮% ಇದು ರಾಜಸ್ತಾನದಲ್ಲಿ ೬.೧೦ ರಿಂದ ಮಹಾರಾಷ್ಟ್ರದಲ್ಲಿ ೨೮% ಹಾಗೂ ಅರುಣಾಚಲ ಪ್ರದೇಶದಲ್ಲಿ ೧೯% ಇದೆ. ಆದರೆ ಕೆಲ ರಾಜ್ಯಗಳಲ್ಲಿ ಇಂತಹ ಪ್ರಗತಿ ಸಾಧ್ಯವಾಗಿಲ್ಲ. ಅವು ಯಾವುವೆಂದರೆ ಬಿಹಾರ, ಗುಜರಾತ, ಜಾರ್ಖಂಡ, ಕರ್ನಾಟಕ, ಮಹಾರಾಷ್ಟ್ರ, ನಾಗಾಲ್ಯಾಂಡ್, ಒರಿಸ್ಸಾ, ಪಂಜಾಬ್, ಸಿಕ್ಕಿಂ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಶೇ. ೧೦೦ ಕ್ಕಿಂತ ಕಡಿಮೆ ಇದೆ.

**ಮಹಿಳಾ ಕೆಲಸಗಾರರ ಭಾಗವಹಿಸುವಿಕೆಯಲ್ಲಿ ಹೆಚ್ಚಳ :**

೨೦೦೬ ರ ಮಾರ್ಚ್‌ನಿಂದ ೨೦೦೭ ರ ಎಪ್ರಿಲ್‌ವರೆಗೆ ಮಹಿಳಾ ಕೆಲಸಗಾರರ ಪ್ರಮಾಣ ಶೇ. ೪೧ ಇತ್ತು. ೨೦೦೭ ರ ಎಪ್ರಿಲ್‌ನಿಂದ ೨೦೦೮ ರ ಫೆಬ್ರುವರಿವರೆಗೆ ಇದು ೪೨.೧೮% ರಷ್ಟು ಏರಿಕೆಯಾಯಿತು. ತಮಿಳುನಾಡಿನಲ್ಲಿ ಅತೀ ಹೆಚ್ಚು (೮೨%) ಮಹಿಳಾ ಕೆಲಸಗಾರರು ಪಾಲ್ಗೊಂಡಿದ್ದಾರೆ. ನಂತರದ ಸ್ಥಾನ ರಾಜಸ್ತಾನ (೭೦%) ದ್ದಾಗಿದೆ. ಇಲ್ಲೂ ಕೂಡ ಸ್ವಯಂ ಗ್ರಾಮೀಣ ಉದ್ಯೋಗ ಯೋಜನೆಗೆ ಹೋಲಿಸಿದರೆ ಗಣನೀಯ ಏರಿಕೆ (೨೫%) ಕಾಣಬಹುದಾಗಿದೆ. ಅದೇನೆ ಇದ್ದರೂ ಪಶ್ಚಿಮಬಂಗಾಳ (೧೭%), ಉತ್ತರ ಪ್ರದೇಶ (೧೪%), ಜಾರ್ಖಂಡ (೨೩%), ಹಿಮಾಚಲಪ್ರದೇಶ (೨೩%) ಮತ್ತು ಬಿಹಾರ್ (೨೭%) ಇದ್ದು ಮಹಿಳಾ ಕೆಲಸಗಾರರ ಪಾಲ್ಗೊಳ್ಳುವಿಕೆಯ ಪ್ರಮಾಣ ಕಡಿಮೆ ಇದೆ.

**ಉದ್ಯೋಗದಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟಪಂಗಡದ ಕುಟುಂಬಗಳ ಪಾಲು :**

೨೦೦೬-೦೭ ರಲ್ಲಿ ಪರಿಶಿಷ್ಟ ಜಾತಿ ೨೫.೩% ಮತ್ತು ಪರಿಶಿಷ್ಟ ಪಂಗಡದ ಕೆಲಸಗಾರರ ಪ್ರಮಾಣ ೩೬.೫% ಇದ್ದು ಒಟ್ಟಾರೆ ಶೇ. ೬೨ ಇತ್ತು. ೨೦೦೮ ರ ಜನವರಿಯಲ್ಲಿ ಈ ಪ್ರಮಾಣ ಶೇ. ೫೮ ಆಯಿತು. (ಪರಿಶಿಷ್ಟ ಜಾತಿ ಶೇ. ೨೭ ಮತ್ತು ಪರಿಶಿಷ್ಟ ಪಂಗಡ ಶೇ. ೩೧) ಇನ್ನೂ

ಹದಿನಾಲ್ಕು ರಾಜ್ಯಗಳಲ್ಲಿ ಗುಜರಾತ, ಹರಿಯಾಣ, ಮಧ್ಯಪ್ರದೇಶ, ಮಣಿಪುರ, ಮೇಘಾಲಯ, ಮಿಜೋರಾಂ, ನಾಗಾಲ್ಯಾಂಡ್, ಓರಿಸ್ಸಾ, ಪಂಜಾಬ್, ರಾಜಸ್ತಾನ, ಸಿಕ್ಕಿಂ, ತಮಿಳುನಾಡು, ತ್ರಿಪುರಾ ಮತ್ತು ಜಾರ್ಖಂಡಗಳಲ್ಲಿ ರಾಷ್ಟ್ರೀಯ ಸರಾಸರಿಗಿಂತ ಹೆಚ್ಚಾಗಿದೆ.

**೨. ಕನಿಷ್ಠ ಕೂಲಿಯ ಮೇಲೆ ಪರಿಣಾಮ :**

ಕನಿಷ್ಠ ವೇತನವು ಕೃಷಿ ಕಾರ್ಮಿಕರ ಸಂಖ್ಯೆಯನ್ನು ಹೆಚ್ಚಿಸಿದೆ. ಮಹಾರಾಷ್ಟ್ರದಲ್ಲಿ ಈ ಕನಿಷ್ಠ ಕೂಲಿಯು ೪೭ ರೂಪಾಯಿಯಿಂದ ೬೬-೭೨ ರೂಪಾಯಿಗಳವರೆಗೆ, ಉತ್ತರಪ್ರದೇಶದಲ್ಲಿ ೫೮ ರೂಪಾಯಿಗಳಿಂದ ೧೦೦ ರೂಪಾಯಿಗಳವರೆಗೆ, ಬಿಹಾರದಲ್ಲಿ ಈ ಮೊತ್ತದ ಪರಿಷ್ಕರಣೆಯಾಗಿ ಅದು ೬೮ ರೂಪಾಯಿಯಿಂದ ೭೭ ರೂಪಾಯಿಗಳವರೆಗೆ, ಕರ್ನಾಟಕದಲ್ಲಿ ೬೨ ರೂಪಾಯಿಯಿಂದ ೭೪ ರೂಪಾಯಿಗಳಿಗೆ ಇತ್ತೀಚಿಗೆ ಇದು ೮೨ ರೂಪಾಯಿಯಿದೆ. ಪಶ್ಚಿಮ ಬಂಗಾಳದಲ್ಲಿ ೬೪ ರೂಪಾಯಿಯಿಂದ ೭೦ ರೂಪಾಯಿ, ಮಧ್ಯಪ್ರದೇಶದಲ್ಲಿ ೫೮ ರೂಪಾಯಿಯಿಂದ ೬೭ ರೂಪಾಯಿ, ಹಿಮಾಚಲ ಪ್ರದೇಶದಲ್ಲಿ ೬೫ ರೂಪಾಯಿಯಿಂದ ೭೫ ರೂಪಾಯಿ, ನಾಗಾಲ್ಯಾಂಡ್‌ದಲ್ಲಿ ೬೬ ರೂಪಾಯಿಯಿಂದ ೧೦೦ ರೂಪಾಯಿ, ಜಮ್ಮು ಮತ್ತು ಕಾಶ್ಮೀರದಲ್ಲಿ ೪೫ ರೂಪಾಯಿಯಿಂದ ೭೦ ರೂಪಾಯಿ ಹಾಗೂ ಛತ್ತೀಸ್‌ಗಡದಲ್ಲಿ ೫೮ ರೂಪಾಯಿಯಿಂದ ೬೬-೭೦ ರೂಪಾಯಿಯಿದೆ.

**೩. ವಿಸ್ತಾರಗೊಂಡ ಕೂಲಿ ಆದಾಯಗಳು :**

ಆರ್ಥಿಕ ನೆರವಿನ ಮೊತ್ತದಲ್ಲಿ ಶೇ. ೬೦ ಕ್ಕೂ ಹೆಚ್ಚು ಮೊತ್ತ ಕಾರ್ಮಿಕರಿಗೆ ನೀಡಲಾದ ಕೂಲಿ ಹಣಕ್ಕೆ ಬಳಕೆಯಾಗಿದೆ. ೨೦೦೭-೦೮ ರ ಆರ್ಥಿಕ ವರ್ಷದ ಫೆಬ್ರುವರಿ ಕೊನೆಗೆ ಒಟ್ಟಾರೆ ವೆಚ್ಚ ೧೨,೯೯೨೬೫ ಕೋಟಿ ರೂಪಾಯಿಗಳಲ್ಲಿ ಸುಮಾರು ೮,೫೯,೩೫೩ ಕೋಟಿ ರೂಪಾಯಿ (೫೮%) ಗಳು ಕೇವಲ ವೇತನ ನೀಡಿಕೆಗಾಗಿ ವೆಚ್ಚವಾಗಿದೆ.

**೪. ಉತ್ಪಾದಕ ಆಸ್ತಿಗಳ ಸೃಷ್ಠಿ :**

೨೦೦೬-೦೭ ರಲ್ಲಿ ಸುಮಾರು ೮ ಲಕ್ಷ ಕಾಮಗಾರಿಗಳನ್ನು ಕೈಕೊಳ್ಳಲಾಯಿತು. ಅದರಲ್ಲಿ ೫.೩ ಲಕ್ಷ ಕಾಮಗಾರಿಗಳು ಜಲಶೇಖರಣೆ, ಮಳೆ ನೀರು ಕೊಯ್ಲು, ನೀರಾವರಿ, ಬರರಕ್ಷಣೆ ಮತ್ತು ಪ್ರವಾಹ ನಿಯಂತ್ರಣ ಕೆಲಸಗಳಾಗಿವೆ. ೨೦೦೭-೦೮ ರಲ್ಲಿ ಸುಮಾರು ೧೫.೦೫ ಲಕ್ಷ ಕಾಮಗಾರಿಗಳನ್ನು ಕೈಗೊಂಡಿದ್ದು ಅದರಲ್ಲಿ ೯.೫೪ ಲಕ್ಷಕ್ಕೂ ಹೆಚ್ಚು ಕಾಮಗಾರಿಗಳು ಜಲಶೇಖರಣೆ ಮತ್ತು ಮಳೆ ನೀರು ಕೊಯ್ಲು, ನೀರಾವರಿ, ಬರರಕ್ಷಣೆ ಮತ್ತು ನೆರೆ ನಿಯಂತ್ರಣ ಕಾಮಗಾರಿಗಳು ನಡೆದಿದ್ದು ತನ್ಮೂಲಕ ಗ್ರಾಮೀಣ ಪ್ರದೇಶದಲ್ಲಿ ನೈಸರ್ಗಿಕ ಮತ್ತು ಜೀವನೋಪಾಯ ಸಂಪನ್ಮೂಲದ ಹೆಚ್ಚಳ ಮಾಡಲಾಗಿದೆ.

**ತರಬೇತಿ :**

೨೦೦೬-೦೭ ರಲ್ಲಿ ೨೦ ಲಕ್ಷ ಪಂಚಾಯತ ರಾಜ್ ಸಂಸ್ಥೆಯ ಸಿಬ್ಬಂದಿ ವರ್ಗ, ೫೮,೦೧೬ ಸರಕಾರಿ ಕೆಲಸಗಾರರು ಮತ್ತು ೨೮,೭೦೧ ಮಂದಿ ಜಾಗೃತ ಹಾಗೂ ಉಸ್ತುವಾರಿ ಸಮಿತಿಯ

ಸದಸ್ಯರಿಗೆ ತರಬೇತಿ ನೀಡಲಾಗಿದೆ. ಪ್ರಸಕ್ತ ಆರ್ಥಿಕ ವರ್ಷದಲ್ಲಿ ೨೦೦೭ ರ ನವೆಂಬರ್‌ವರೆಗೆ ೩೨.೪೧ ಲಕ್ಷ ಪಂಚಾಯತ್ ರಾಜ್ ಸಂಸ್ಥೆ ಸಿಬ್ಬಂದಿಗೆ ಮತ್ತು ೧,೭೫,೭೪೫ ಸರಕಾರಿ ನೌಕರರಿಗೆ ಹಾಗೂ ೨,೩೯,೪೭೪ ಜಾಗೃತ ಹಾಗೂ ಉಸ್ತುವಾರಿ ಸಮಿತಿಯ ಸದಸ್ಯರಿಗೆ ತರಬೇತಿ ನೀಡಲಾಗಿದೆ.

ರಾಜ್ಯ ಸರಕಾರಿ ಅಧಿಕಾರಿಗಳಿಗೆ ಸಹವರ್ತಿ ಕಲಿಕಾ ಕಾರ್ಯಗಳನ್ನು ಸಚಿವಾಲಯದಿಂದ ಏರ್ಪಡಿಸಲಾಗಿತ್ತು. ಸಾಮಾಜಿಕ ಲೆಕ್ಕ, ಕಾಮಗಾರಿ ಪ್ರದೇಶದ ನಿರ್ವಹಣೆ ಮೊದಲಾದ ವಿಷಯಗಳ ಮೇಲೆ ವಿಶೇಷ ಗಮನಕೊಟ್ಟು ತರಬೇತಿಯನ್ನು ನೀಡಲಾಯಿತು.

**೫. ಹಣಕಾಸು ವಿತರಣೆ :**

ಸಾಂಸ್ಥಿಕ ಲೆಕ್ಕಪತ್ರಗಳ ಮೂಲಕ ವೇತನ ಪಾವತಿಯ ಪದ್ಧತಿಯನ್ನು ಸಾರ್ವತ್ರಿಕರಣಗೊಳಿಸುವ ಉದ್ದೇಶದೊಂದಿಗೆ ಎಲ್ಲ ರಾಜ್ಯಗಳಿಗೂ ಅಂಚೆ ಕಛೇರಿ ಮತ್ತು ಬ್ಯಾಂಕ ಖಾತೆಯ ಮೂಲಕ ವೇತನ ವಿತರಿಸುವಂತೆ ಶಿಫಾರಸ್ಸು ಮಾಡಲಾಗಿತ್ತು. ಆಂಧ್ರಪ್ರದೇಶ, ಜಾರ್ಖಂಡ ಮತ್ತು ಕರ್ನಾಟಕದಲ್ಲಿ ಅಂಚೆ ಕಛೇರಿ ಮತ್ತು ಬ್ಯಾಂಕುಗಳು ವೇತನ ಪಡೆಯುವವರ ಖಾತೆ ತೆರೆಯಲಿ ಎಂದು ತಮ್ಮಲ್ಲಿನ ಬ್ಯಾಂಕುಗಳು ಮತ್ತು ಅಂಚೆ ಕಛೇರಿ ಸಾಂಸ್ಥಿಕ ಜಾಲದ ನಕಾಶೆ ಇಟ್ಟುಕೊಳ್ಳಬೇಕಿದ್ದು ಇದುವರೆಗೆ ೯೬ ಲಕ್ಷ ಅಂಚೆ ಕಛೇರಿ ಮತ್ತು ಬ್ಯಾಂಕ ಖಾತೆಗಳನ್ನು ತೆರೆಯಲಾಗಿದೆ.

**೬. ಪ್ರಮುಖ ಕ್ಷೇತ್ರಗಳು :**

ಕಾರ್ಯಕ್ರಮ ನಿರ್ವಹಣೆಯನ್ನು ಬಲಪಡಿಸಲು ಕೈಗೊಳ್ಳಲಾದ ಕೆಲ ಕ್ರಮಗಳು ಈ ರೀತಿ ಇವೆ.

ಹಕ್ಕೊತ್ತಾಯ ಹುಟ್ಟು ಹಾಕಲು ಅತೀ ಅವಶ್ಯಕವಾದ ಜಾಗೃತಿಗೆ ಮಾಹಿತಿ, ಶಿಕ್ಷಣ ಮತ್ತು ಸಂವಹನೆಯನ್ನು ವಿಸ್ತರಿಸಲಾಗಿದೆ. ಸರಪಂಚರಿಗೆ ಒಂದು ದಿನದ ಅಭಿಶಿಕ್ಷಣ ಪ್ರತಿ ಹದಿನೈದು ದಿನಕ್ಕೆ ಉದ್ಯೋಗ ದಿನಾಚರಣೆ, ಗ್ರಾಮ ಸಭೆಗಳ ಆಯೋಜನೆ, ಸ್ಥಳೀಯ ಪತ್ರಿಕೆಗಳ ಬಳಕೆ, ರೇಡಿಯೋ, ಟಿ.ವ್ಹಿ., ಚಲನಚಿತ್ರ ಮತ್ತು ಸ್ಥಳೀಯ ಸಂಸ್ಕೃತಿಕ ಪ್ರಚಾರಗಳ ಬಳಕೆ ಮೊದಲಾದ ವಿವಿಧ ಉಪಕರಣಗಳನ್ನು ತೆಗೆದುಕೊಳ್ಳಲಾಗಿದೆ. ಅಲ್ಲದೆ ಭಿತ್ತಿ ವರ್ಣಚಿತ್ರಗಳು, ಕರಪತ್ರಗಳು ಮೊದಲಾದವುಗಳನ್ನು ಪ್ರಕಟಿಸಿ ಅರಿವು ಮೂಡಿಸಲು ಪ್ರಯತ್ನಿಸಲಾಗಿದೆ.

ಕೆಲಸಕ್ಕಾಗಿ ಹಕ್ಕೊತ್ತಾಯ ಬಂದರೆ ಅದಕ್ಕೆ ತಕ್ಕಂತೆ ಸಕಾಲದಲ್ಲಿ ಕಾಮಗಾರಿ ಆರಂಭಿಸಲು ಗುಣಾತ್ಮಕ ಯೋಜನೆ ಅತ್ಯವಶ್ಯಕ. ಪ್ರತಿ ಹಳ್ಳಿಯಲ್ಲಿ ತಾಂತ್ರಿಕ ಹಾಗೂ ಆಡಳಿತಾತ್ಮಕ ಅನುಮೋದನೆಗಳೊಂದಿಗೆ ಯೋಜನೆಗಳನ್ನು ಸಿದ್ಧಪಡಿಸಿಕೊಂಡಿದ್ದರೆ ಮಾತ್ರ ಸಕಾಲದಲ್ಲಿ ಕಾಮಗಾರಿ ಆರಂಭವಾಗಲು ಸಾಧ್ಯವಾಗುತ್ತದೆ. ಪರಿಣಾಮಕಾರಿಯಾದ ಯೋಜನೆಯು ಗುಣಮಟ್ಟದ ಕಾಮಗಾರಿಯಾಗಿ ಪರಿವರ್ತನೆಗೊಳ್ಳಲು ಸಾಧ್ಯವಾಗುತ್ತದೆ.

ಜಾಬ್‌ಕಾರ್ಡ್ / ಉದ್ಯೋಗ ಚೀಟಿ ನೀಡಿಕೆ ಮೂಲಕ ಪಾರದರ್ಶಕ ಸುರಕ್ಷಾ ಸೂತ್ರಗಳ ಅಳವಡಿಕೆ ತತ್ವವನ್ನು ಖಾತರಿಗೊಳಿಸಲಾಗಿದೆ. ಜೊತೆಗೆ ನೌಕರರ ಹಾಜರಾತಿ ದಾಖಲೆ ಮತ್ತು ರಾಜ್ಯ ಸರಕಾರಗಳಿಂದ ಅವುಗಳ ಪರಿಶೀಲನೆ, ಬಾಹ್ಯ ಸಂಸ್ಥೆಗಳಿಂದಲೂ ಹಾಜರಾತಿ ಪರಿಶೀಲನೆ ಹಾಗೂ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಂತರ್‌ಜಾಲದ ಅಳವಡಿಕೆ, ವೇತನದ ಪಾರದರ್ಶಕ ಪಾವತಿಗೆ ಬ್ಯಾಂಕ್ ಖಾತೆ, ಅಂಚೆ ಕಛೇರಿ ಖಾತೆ ಬಳಕೆ ಜೊತೆಗೆ ಉಳಿತಾಯ ಮಾಡಲು ಉತ್ತೇಜನ www.nrega.nic.in ಅಂತರ್‌ಜಾಲವನ್ನು ರೂಪಿಸಲಾಗಿದೆ. ನೇರ ಉಸ್ತುವಾರಿ ಮತ್ತು ನಿರ್ವಹಣೆ, ಅಂಕಿ ಅಂಶಗಳ ಪಾರದರ್ಶಕತೆ ಹಾಗೂ ಅಗತ್ಯ ಮಾಹಿತಿಗೆ ಜನರು ಈ ವೆಬ್‌ತಾಣವನ್ನು ನೇರ ಸಂಪರ್ಕಿಸಬಹುದು. ಇದರಿಂದ ಲಭ್ಯ ಮಾಹಿತಿ ಪಾರದರ್ಶಕವಾಗಿದ್ದು ಯಾರು ಬೇಕಾದರೂ ಪಡೆಯಬಹುದಾಗಿದೆ. ಗ್ರಾಮ ಮಟ್ಟದ ಅಂಕಿ ಅಂಶಗಳನ್ನು ಆಂತರಿಕ ಪರಿಶೀಲನೆಗೆ ಒಳಪಡಿಸಿಕೊಳ್ಳಲಾಗುತ್ತದೆ. ನೋಂದಣಿ, ಜಾಬ್‌ಕಾರ್ಡ್ ನೀಡಿಕೆ, ನೌಕರರ ಪಟ್ಟಿ, ಕಾಮಗಾರಿ ಆಯ್ಕೆ ಮತ್ತು ಅರ್ಹ ಫಲಾನುಭವಿಗಳ ಪಟ್ಟಿ, ಅದರ ದಾಖಲೆಗಳು, ಮಂಜೂರಾದ ಕಾಮಗಾರಿಗಳ ಅವಧಿ, ಕಾಮಗಾರಿಯ ಅಂದಾಜು, ಚಾಲ್ತಿಯಲ್ಲಿರುವ ಕಾಮಗಾರಿಗಳು, ಕಾಮಗಾರಿಗಳ ಅಂದಾಜು ವೆಚ್ಚ ಇತ್ಯಾದಿಗಳು ಪಾರದರ್ಶಕವಾಗಿವೆ.

**೭. ಬೇಡಿಕೆ, ಉದ್ಯೋಗ ನೀಡಿಕೆ :**

ಉದ್ಯೋಗಕ್ಕೆ ಎಷ್ಟು ಬೇಡಿಕೆ ಬಂದಿದೆ, ಎಷ್ಟು ಜನರಿಗೆ ನೀಡಲಾಗಿದೆ, ಎಷ್ಟು ಆರ್ಥಿಕ ನೆರವು ದೊರೆಯಲಿದೆ, ಬಳಸಲಾದ ಮೊತ್ತ ಎಷ್ಟು, ಖರ್ಚಾದ ಮೊತ್ತದಲ್ಲಿ ವೇತನದ ಪ್ರಮಾಣ, ಸಲಕರಣೆಗಳು, ಆಡಳಿತಾತ್ಮಕ ವೆಚ್ಚಗಳು ಮೊದಲಾದ ಹಣಕಾಸು ಸೂಚಕಗಳು ಪ್ರಮುಖ ಅಂಕಿ ಅಂಶಗಳನ್ನೆಲ್ಲ ಅಂತರ್‌ಜಾಲದಲ್ಲಿ ನೀಡುವ ಕಾರಣಗಳಿಂದ ದಾಖಲೆ, ವರದಿಗಳ ಪರಿಶೀಲನೆ ಸುಲಭ ಸಾಧ್ಯವಾಗಿದೆ. ಎಲ್ಲ ಉದ್ಯೋಗ ಚೀಟಿ (ಜಾಬ್‌ಕಾರ್ಡ್) ಹಾಗೂ ನೌಕರರ ಪಟ್ಟಿ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಂತರ್‌ಜಾಲದಲ್ಲಿ ಲಭ್ಯವಿದ್ದು ಇದುವರೆಗೆ ೨,೪೩,೨೫,೯೮೨ ಉದ್ಯೋಗ ಚೀಟಿ ನೀಡಲಾಗಿದೆ. ಹಾಗೂ ೩೨,೯೬,೪೪೮ ನೌಕರರ ಪಟ್ಟಿ ಅಂತರ್‌ಜಾಲದಲ್ಲಿ ದೊರೆಯುತ್ತದೆ.

ಸತತ ವೀಕ್ಷಣೆಯ ಮತ್ತು ಉಸ್ತುವಾರಿಯ ಪ್ರಕ್ರಿಯೆಯ ಭಾಗವಾಗಿ ಆಂತರಿಕ ಮತ್ತು ಬಾಹ್ಯ ಸಂಸ್ಥೆಗಳಿಂದ ಕ್ಷೇತ್ರ ಪರಿಶೀಲನೆಗಳನ್ನು ನಡೆಸಲಾಗುತ್ತದೆ. ಕೇಂದ್ರ ಉದ್ಯೋಗ ಭರವಸೆ ಪರಿಷತ್ ಮತ್ತು ರಾಜ್ಯ ಉದ್ಯೋಗ ಭರವಸೆ ಪರಿಷತ್‌ಗಳನ್ನು ರಚಿಸಲಾಗಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮೊದಲ ಹಂತದ ಎಲ್ಲ ಜಿಲ್ಲೆಗಳನ್ನು ಮತ್ತು ಎರಡನೆಯ ಹಂತದಲ್ಲಿ ೧೧೩ ಕ್ಷೇತ್ರಗಳಿಗೆ ರಾಷ್ಟ್ರೀಯ ಮಟ್ಟದ ವೀಕ್ಷಕರು ಭೇಟಿ ನೀಡಿದ್ದಾರೆ.

ಗ್ರಾಮೀಣ ಅಭಿವೃದ್ಧಿ ಸಚಿವಾಲಯವು ಆಂತರಿಕ ಉಸ್ತುವಾರಿಯ ಭಾಗವಾಗಿ ತೀವ್ರಗತಿಯ ಉಸ್ತುವಾರಿಯನ್ನು ಕೈಗೊಳ್ಳುತ್ತದೆ. ರಾಜ್ಯಗಳು ಶೇ. ೧೦೦ ರ ಪರಿಶೀಲನೆಯನ್ನು

ಬ್ಲಾಕ್‌ಮಟ್ಟದಲ್ಲಿ ಶೇ. ೧೦ ರ ಮತ್ತು ಶೇ. ೨ ರ ಪರಿಶೀಲನೆಯನ್ನು ರಾಜ್ಯಮಟ್ಟದಲ್ಲಿ ಕೈಗೊಳ್ಳಬೇಕಾಗುತ್ತದೆ. ಕಾಯ್ದೆಯ ಮಾರ್ಗದರ್ಶಿ ಸೂತ್ರಗಳ ಪ್ರಕಾರ ಮಂಜೂರಾದ ಪ್ರತಿಯೊಂದು ಕಾಮಗಾರಿಯ ಪರಿಶೀಲನೆ ಕಡ್ಡಾಯವಾಗಿದೆ. ಗ್ರಾಮದ ಸದಸ್ಯರನ್ನು ಒಳಗೊಂಡ ಸ್ಥಳೀಯ ಜಾಗೃತ ಮತ್ತು ಉಸ್ತುವಾರಿ ಸಮಿತಿ ಕಾಮಗಾರಿಯ ಪ್ರಗತಿ ಮತ್ತು ಗುಣಮಟ್ಟವನ್ನು ಪರಿಶೀಲಿಸುತ್ತದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ಮಹತ್ವದ ಲಕ್ಷಣವೆಂದರೆ ಕಟ್ಟುನಿಟ್ಟಿನ ಸಾರ್ವಜನಿಕ ವಿಚಕ್ಷತೆ (ಎನ್.ಆರ್.ಇ.ಜಿ. ಪರಿಚ್ಛೇದ ೧೭) ಸಾಧನವಾಗಿ ಸಾಮಾಜಿಕ ಲೆಕ್ಕ ಪರಿಶೋಧನೆಗೆ ಕೇಂದ್ರ ಸರಕಾರದ ಪಾತ್ರ ಮಹತ್ವದ್ದಾಗಿದೆ. ಇದರ ಮುಖ್ಯ ಉದ್ದೇಶವೆಂದರೆ ಯೋಜನೆಗಳು, ಕಾನೂನು ಮತ್ತು ಕಾಮಗಾರಿಗಳ ಅನುಷ್ಠಾನದಲ್ಲಿ ಸಾರ್ವಜನಿಕ ಹೊಣೆಗಾರಿಕೆಯನ್ನು ಖಾತರಿಪಡಿಸುವುದು. ಸಾಮಾಜಿಕ ಲೆಕ್ಕಪತ್ರ ಪರಿಶೋಧನೆಯು ಇಂದು ನಿಯಮಿತ ಸಾರ್ವಜನಿಕ ಉತ್ತರದಾಯಿತ್ವ ವ್ಯವಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ. ಇದು ಹೊಸ ಪರಿಕಲ್ಪನೆಯಾಗಿರುವ ಸಾಮಾಜಿಕ ಲೆಕ್ಕಪತ್ರ ಪರಿಶೋಧನೆಯ ಉದ್ದೇಶ ಕಾನೂನಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಲು ಮಾರ್ಗದರ್ಶನ ನೀಡುವುದಾಗಿದೆ. ಇದರ ಜೊತೆಗೆ ರಾಜ್ಯಗಳ ಸಾಮರ್ಥ್ಯ ಹೆಚ್ಚಳಕ್ಕೆ ಬೆಂಬಲ ಕೊಡುವುದೂ ಆಗಿದೆ. ಎನ್.ಆಯ್.ಆರ್.ಡಿ.ಯು ರಾಜ್ಯಗಳ ಬಳಕೆಗಾಗಿ ಸಾಮಾಜಿಕ ಲೆಕ್ಕಪತ್ರ ಪರಿಶೀಲನೆಗಾಗಿ ಕೈಪಿಡಿಯೊಂದನ್ನು ಸಹ ಬಿಡುಗಡೆ ಮಾಡಿದೆ.

ಪಾರದರ್ಶಕತೆ ಮತ್ತು ಸಾರ್ವಜನಿಕರಿಗೆ ಬಹಿರಂಗಪಡಿಸುವದಕ್ಕೆ ಈ ಕಾನೂನು ಅತೀವ ಒತ್ತು ನೀಡುತ್ತದೆ. ಕಾಯ್ದೆಯ ಪರಿಚ್ಛೇದ ೧೧ (೧ ಎಫ್) ರಂತೆ ವಾರ್ಷಿಕ ವರದಿಯನ್ನು ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಯಲ್ಲಿ ಮಂಡಿಸಬೇಕು. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯನ್ನು ಕಾಯ್ದೆಯ ಅನುಷ್ಠಾನದ ಕುರಿತು ೨೦೦೬-೦೭ ರ ವಾರ್ಷಿಕ ವರದಿಯನ್ನು ಸಿದ್ಧಪಡಿಸಿ ಲೋಕಸಭೆಯಲ್ಲಿ ಮಂಡಿಸಲಾಯಿತು.

ಕಾರ್ಯನಿರ್ವಹಣೆ ಪ್ರದೇಶದಲ್ಲಿ ಎದುರಾಗುವಂತಹ ಸಮಸ್ಯೆಗಳನ್ನು ಎದುರಿಸಲು ಸ್ಥಳೀಯವಾಗಿ ರೂಪುಗೊಳ್ಳುವ ಪರಿಹಾರ ಮತ್ತು ಆವಿಷ್ಕಾರಗಳು ಉಪಯುಕ್ತ. ಈ ಸ್ಥಳೀಯ ಪರಿಹಾರ, ಮಾರ್ಗೋಪಾಯಗಳು ಎಲ್ಲರಿಗೂ ದೊರೆಯುವಂತಾಗಲು ಗ್ರಾಮೀಣ ಅಭಿವೃದ್ಧಿ ಸಚಿವಾಲಯವು ವೆಬ್‌ತಾಣವನ್ನು ರೂಪಿಸಿದೆ. ಇಲ್ಲಿ ಪರಸ್ಪರ ಅಭಿಪ್ರಾಯ, ಅನುಭೋಗಗಳ ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹೊಸ ಹೊಸ ಆಲೋಚನೆಗಳು, ಅನುಭವಗಳು, ಅನಿಸಿಕೆಗಳು ಎಲ್ಲವನ್ನು ಸಮಾಜದ ಎಲ್ಲ ವರ್ಗಗಳ ಜೊತೆಗೆ ಸಂಭಾಷಿಸಲು ವೇದಿಕೆ ಆಗುತ್ತದೆ. ಈ ಜ್ಞಾನಜಾಲವು ವ್ಯಾಪಕ ಶ್ರೇಣಿಯ ಪರಿಹಾರಗಳನ್ನು ನೀಡುವ ಮೂಲಕ ಜನರ ಸಂಪರ್ಕ ಉಂಟುಮಾಡುವುದಲ್ಲದೆ ಅವಶ್ಯಕತೆಗೆ ತಕ್ಕಂತೆ ಜ್ಞಾನವನ್ನು ಪಡೆದುಕೊಳ್ಳಲು ಸಹಾಯವಾಗುತ್ತದೆ.

ಪೌರಸಮಾಜದ ಸಂಸ್ಥೆಯ (ರೋಜಗಾರ ಜಾಗರಣ ಪುರಸ್ಕಾರ) ಉನ್ನತ ಕೊಡುಗೆಗೆ ಪುರಸ್ಕಾರವನ್ನು ಇತ್ತೀಚಿಗೆ ಪ್ರಕಟಸಲಾಗಿದೆ. ಈ ಪುರಸ್ಕಾರದ ಉದ್ದೇಶ ಪ್ರತಿವರ್ಷ ನೋಂದಣಿ ಮಾಡಿಸಿದ ಪೌರ ಸಂಸ್ಥೆಯು ಮಾಡಿದ ಉತ್ಕೃಷ್ಟ ಮತ್ತು ಅನುಕರಣೀಯ ಕೊಡುಗೆಯನ್ನು ಗುರುತಿಸುವುದು. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ ಅನುಷ್ಠಾನಗೊಂಡು ಎರಡು ವರ್ಷಗಳಾಗಿದ್ದು ಈ ಅವಧಿಯಲ್ಲಿನ ಅನುಭವ ಮತ್ತು ಕಲಿಕೆ ಅದನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಾಧ್ಯಮಾಡಿದೆ. ಈ ಕಾರ್ಯಕ್ರಮವು ಫಲಾನುಭವಿಗಳ ಆದಾಯದಲ್ಲಿನ ಹೆಚ್ಚಳ, ದೀರ್ಘ ಬಾಳಿಕೆಯ ಆಸ್ತಿ ಸೃಷ್ಟಿಯನ್ನು ಮುಂದುವರೆಸಿಕೊಂಡು ಹೋಗುವುದಲ್ಲದೆ ಗ್ರಾಮೀಣ ಭಾರತಕ್ಕೆ ದೀರ್ಘಾವಧಿ ವಾಸ್ತವಿಕ ಉಪಯುಕ್ತತೆಗಳನ್ನು ತಂದುಕೊಡುತ್ತದೆ.

**೩.೭ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾನೂನು ಮತ್ತು ಮಹಾಲೇಖಪಾಲರ ಸಮೀಕ್ಷಾ ವರದಿ :**

ರಾಷ್ಟ್ರೀಯ ಉದ್ಯೋಗ ಖಾತರಿ ಕಾಯ್ದೆಯನ್ನು ಎರಡು ವರ್ಷಗಳ ಹಿಂದೆ ದೇಶದ ೨೦೦ ಜಿಲ್ಲೆಗಳಲ್ಲಿ ಜಾರಿಯಲ್ಲಿ ತರಲಾಯಿತು. ಈ ಮೊದಲ ಹಂತದಲ್ಲಿ ಹಲವಾರು ಸಮಸ್ಯೆಗಳು ಗೋಚರಿಸಿದವು. ಕಾಯ್ದೆಯು ಸಕಾರಾತ್ಮಕವಾಗಿದ್ದು ಒಂದು ಉತ್ತಮವಾದ ಹೆಜ್ಜೆಯಾಗಿದೆ. ಆದರೆ, ದೇಶದ ಮಹಾಲೇಖಪಾಲರ ಆಡಿಟ್ ಕಣ್ಣನಡಿ ಬಂದಾಗ ಅನೇಕ ಅಂಶಗಳು ಗೋಚರಿಸಿದವು.

ಮಾಧ್ಯಮದ ವರದಿಗಳಿಗೆ ವ್ಯತಿರಿಕ್ತವಾದಂತಹ ಅಂಶಗಳೇನೂ ಮಹಾಲೇಖಪಾಲರ ವರದಿಯಲ್ಲಿ ಹೊರಬಂದಿಲ್ಲ. ದೊಡ್ಡ ಪ್ರಮಾಣದಲ್ಲಿ ಹಣದ ದುರುಪಯೋಗವೇನೂ ಗೋಚರವಾಗಿಲ್ಲ ಅಥವಾ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ ವಿಫಲವಾಗಿದೆ ಎಂಬ ತೀರ್ಮಾನಕ್ಕೂ ಬರಲಾಗಿಲ್ಲ. ಮಹಾಲೇಖಪಾಲರ ವರದಿ ಪ್ರಮುಖವಾಗಿ ವಿಧಿವಿಧಾನಗಳಲ್ಲಿನ ಲೋಪದೋಷಗಳನ್ನು ಪ್ರಸ್ತಾಪಿಸಿದ್ದು ಅದನ್ನು ಸರಿಪಡಿಸುವದಕ್ಕಾಗಿ ರಚನಾತ್ಮಕ ಕ್ರಮಗಳ ಅವಶ್ಯಕತೆ ಇದೆ ಎಂದು ತಿಳಿಸಿದೆ. ದೇಶದ ಎಲ್ಲ ಭಾಗಗಳಿಗೆ ಈ ಕಾಯ್ದೆಯನ್ನು ೨೦೦೮ ಎಪ್ರಿಲ್‌ನಿಂದ ವಿಸ್ತರಿಸುತ್ತಿರುವ ಈ ಸಂದರ್ಭದಲ್ಲಿ ಲೇಖಪಾಲರ ವರದಿಯು ಒಂದು ಉಪಯುಕ್ತವಾದ ಮತ್ತು ಸಮಯೋಚಿತವಾದ ಎಚ್ಚರಿಕೆಯಾಗಿದೆ.

ಬಹು ಪ್ರಮುಖವಾದ ಪ್ರಶ್ನೆಯೆಂದರೆ ಈ ಉದ್ಯೋಗ ಖಾತರಿ ಕಾಯ್ದೆಯ ಧನರಾಶಿ ನಿಜಕ್ಕೂ ಬಡವರನ್ನು ತಲುಪುತ್ತಿದೆಯೇ ಎಂಬುದು ಲೇಖಪಾಲರ ವರದಿಯಲ್ಲಿನ ಅಂಶಗಳಂತೆಯೇ ಕಾಯ್ದೆಯಡಿ ಕೈಗೊಳ್ಳಲಾದ ಯೋಜನೆಗಳಲ್ಲಿ ಕೆಲಸ ಮಾಡಿದವರ ಹೆಸರುಗಳನ್ನು ಪರಿಶೀಲಿಸುವ ಕಾರ್ಯವನ್ನು ಅಲಹಾಬಾದ್‌ನ ಜಿ. ಬಿ. ಪಂಥ ಸಮಾಜ ವಿಜ್ಞಾನ ಸಂಸ್ಥೆ ಮಾಡಿತು. ದೆಹಲಿ ವಿಶ್ವವಿದ್ಯಾಲಯ ಮತ್ತಿತರ ಕಡೆಗಳಿಂದ ತರಬೇತಿದಾರ ವಿದ್ಯಾರ್ಥಿಗಳಿರುವ ತಂಡಗಳನ್ನು ರಚಿಸಲಾಯಿತು. ಸರ್ವೆಗೆ ಮೊದಲು ಉದ್ಯೋಗ

ನಿರ್ವಹಿಸಿದವರ ಹೆಸರಿನ ಮಾದರಿ ಪಟ್ಟಿಗಳನ್ನು ಸಂಗ್ರಹಿಸಲಾಯಿತು. ಮತ್ತು ಅವರ ಸಂದರ್ಶನ ಮಾಡಿ ಕೂಲಿ ಕಾರ್ಮಿಕರು ಕೆಲಸ ಮಾಡಿದ ದಿನಗಳು, ಪಡೆದ ಕೂಲಿ ಇತ್ಯಾದಿಗಳ ಬಗ್ಗೆ ವಿವರವಾದ ಪ್ರಶ್ನೆಗಳಿದ್ದವು.

ರಾಜಸ್ತಾನದಲ್ಲಿರುವ ಮಾಹಿತಿ ಹಕ್ಕು ಆಂದೋಲನದ ಮಾದರಿಯಂತೆ ಉದ್ಯೋಗ ನಿರ್ವಹಿಸಿದವರ ಪಟ್ಟಿಯನ್ನು ಪರಿಶೀಲಿಸಲಾಯಿತು. ಈ ಅವಕಾಶವನ್ನು ಭ್ರಷ್ಟಾಚಾರ ತಡೆಗೆ ರಕ್ಷಣಾ ವ್ಯವಸ್ಥೆ ರೂಪಿಸಲು ಅವಕಾಶವೆಂಬುದಾಗಿಯೂ ಪರಿಗಣಿಸಲಾಯಿತು. (ಪಟ್ಟಿಗಳನ್ನು ಅವರಾಗಿಯೇ ಒದಗಿಸುವರು, ಉದ್ಯೋಗ ಕಾರ್ಡ್‌ಗಳನ್ನು ನಿಯಮಿತವಾಗಿ ನಿರ್ವಹಿಸುವುದು ಮತ್ತು ಸಾಮಾಜಿಕ ತಪಾಸಣೆಗಳು) ಇವುಗಳಲ್ಲಿ ಹಲವನ್ನು ಕಾಯ್ದೆಯ ಅನುಷ್ಠಾನ ಸೂತ್ರಗಳಲ್ಲಿ ಅಳವಡಿಸಲಾಗಿದೆ. ರಾಜಸ್ತಾನದಲ್ಲಿ ಕಂಡುಬಂದಿರುವ ಅಂಶ ಏನೆಂದರೆ, ಭ್ರಷ್ಟಾಚಾರವನ್ನು ನಿರ್ಮೂಲನಗೊಳಿಸುವಲ್ಲಿ ಇಂತಹ ಅನೌಪಚಾರಿಕ ನಿಯಮಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಈ ಹೊಸಬಗೆಯ ತಪಾಸಣಾ ಕಾರ್ಯಕ್ರಮವನ್ನು ಮೇ - ಜೂನ್ ೨೦೦೭ ರಲ್ಲಿ ಜಾರ್ಖಂಡ ಮತ್ತು ಛತ್ತೀಸ್‌ಗಡ ರಾಜ್ಯದಲ್ಲಿ ಹೆಚ್ಚಿನ ಭ್ರಷ್ಟಾಚಾರ ಇರುವ ಪ್ರದೇಶಗಳಲ್ಲಿ ಆರಂಭಿಸಲಾಯಿತು. ಎರಡು ವರ್ಷಗಳ ಹಿಂದೆ ಇಲ್ಲಿ ಜಾರಿಯಲ್ಲಿದ್ದ ರಾಷ್ಟ್ರೀಯ ಕೂಲಿಗಾಗಿ ಕಾಳು ಕಾರ್ಯಕ್ರಮದಲ್ಲಿ ಭ್ರಷ್ಟಾಚಾರ ಆರೋಪ ಕಾಣಬಂದಿತ್ತು. ಛತ್ತೀಸ್‌ಗಡದ ಸ್ವರಬುಜಾ ಜಿಲ್ಲೆಯಲ್ಲಿ ನಡೆದ ಕೂಲಿಗಾಗಿ ಕಾಳು ಯೋಜನೆಯ ಹಣ ದುರುಪಯೋಗ ಆರೋಪ ಇನ್ನೂ ಹಸಿಯಾಗಿತ್ತು. ಕೂಲಿಗಾಗಿ ಕಾಳು ಹೆಸರನ್ನು 'ಲೂಟಿಗಾಗಿ ಕಾಳು' ಎಂದು ಬಣ್ಣಿಸಲಾಗುತ್ತಿತ್ತು.

ಇದೇ ಜಿಲ್ಲೆಯಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ ಜಾರಿಗೆ ಬಂದಾಗ ಭ್ರಷ್ಟಾಚಾರ ಕಡಿಮೆಯಾಗುತ್ತಿದೆ ಎಂಬ ವಿಷಯವು ಕೇಳಿ ಬಂದಿತು. ಉದ್ಯೋಗ ಪಟ್ಟಿಗಳ ಪರಿಶೀಲನೆಯಿಂದ ಈ ಅಂಶವನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಗ್ರಾಮಪಂಚಾಯತಿಗಳು ನಡೆಸಿದ ೯ ಕಾಮಗಾರಿಗಳಲ್ಲಿ ಶೇ. ೯೫ ರಷ್ಟು ಕೂಲಿಯನ್ನು ಉದ್ಯೋಗಕರ್ತರ ಪಟ್ಟಿಯಲ್ಲಿ ಇರುವಂತೆಯೇ ನೀಡಲಾಗಿತ್ತು. ಸಮೀಪ ಕೋರಿಯಾ ಜಿಲ್ಲೆಯಲ್ಲೂ ಈ ಪರಿಶೀಲನೆ ನಡೆಸಿದಾಗ ಕಾಯ್ದೆಯಡಿ ನಡೆಸಿದ ಕೆಲಸಗಳಲ್ಲಿ ಕೇವಲ ಶೇ. ೫ ರಷ್ಟು ಸೋರಿಕೆ ಮಾತ್ರ ಕಂಡುಬಂದಿತು.

ಜಾರ್ಖಂಡನ ರಾಂಚಿ ಜಿಲ್ಲೆಯ ೫ ಆಯ್ದ ಗ್ರಾಮ ಪಂಚಾಯತಿಗಳಲ್ಲಿ ಸುಮಾರು ಶೇ. ೩೩ ರಷ್ಟು ಸೋರಿಕೆ ಕಂಡುಬಂದಿತು. ಇದು ಸಂಪೂರ್ಣವಾಗಿ ಒಪ್ಪಲಾಗದ ಸಂಗತಿಯಾಗಿದ್ದರೂ ಉದ್ಯೋಗ ಖಾತರಿ ಯೋಜನೆಯ ಹಣವೆಲ್ಲವು ಸೋರಿ ಹೋಗುತ್ತದೆ ಎಂಬ ಮಾತನ್ನು ಈ ಅಂಕಿ ಅಂಶಗಳು ದೃಢೀಕರಿಸುವದಿಲ್ಲ. ಜಾರ್ಖಂಡನಲ್ಲೂ ಭ್ರಷ್ಟಾಚಾರದಲ್ಲಿ ಇಳಿಕೆ ಪ್ರವೃತ್ತಿ ಇದರಿಂದ ದೃಢವಾಗುತ್ತದೆ. ಹಿಂದಿನ ಉದಾಹರಣೆಗಳಲ್ಲಿ ಉದ್ಯೋಗಕರ್ತರ ಇಡೀ ಪಟ್ಟಿಯನ್ನೇ ಸಂಪೂರ್ಣವಾಗಿ ಸುಳ್ಳು ಹೆಸರುಗಳಿಂದ ತಯಾರಿಸಲಾಗುತ್ತಿತ್ತು. ನಂತರ ಅಧ್ಯಯನ ತಂಡವು

ತಮಿಳುನಾಡಿಗೆ ಜುಲೈ - ಆಗಸ್ಟ್ ೨೦೦೭ ರಲ್ಲಿ ವಿಲ್ಲುಪುರಂ ಜಿಲ್ಲೆಯಲ್ಲಿ ಈ ಉದ್ಯೋಗ ಖಾತರಿ ಕಾಯ್ದೆ ಅನುಷ್ಠಾನದ ಸಾಮಾಜಿಕ ಆಡಿಟ್‌ನಲ್ಲಿ ಪಾಲ್ಗೊಂಡು ಪರಿಶೀಲಿಸಿದಾಗ ಅಲ್ಲಿ ಈ ಕಾಯ್ದೆಯಲ್ಲಿಯ ಭ್ರಷ್ಟಾಚಾರ ಬಾರದಂತೆ ಸಂಪೂರ್ಣವಾಗಿ ತಡೆಯುವ ಪ್ರಯತ್ನಗಳು ಕಾಣಬಂದವು. ಉದಾಹರಣೆಗೆ ಪ್ರತಿ ಮಹಿಳಾ ಫಲಾನುಭವಿಯು ಪ್ರತಿದಿನ ಹಾಜರಿ ಪುಸ್ತಕದಲ್ಲಿ ತನ್ನ ಸಹಿ ಅಥವಾ ಹೆಬ್ಬೆಟ್ಟು ರುಜುವನ್ನು ಹಾಕಬೇಕು ಎಂಬ ವ್ಯವಸ್ಥೆಯನ್ನು ತಮಿಳುನಾಡು ಸರ್ಕಾರ ಜಾರಿಗೆ ತಂದಿದೆ. ಅಲ್ಲದೇ ಈ ಹಾಜರಿ ಪುಸ್ತಕವನ್ನು ಸಾರ್ವಜನಿಕರು ಪ್ರತಿನಿತ್ಯವೂ ನೋಡಬಹುದಾಗಿದೆ. ಇದರರ್ಥವೇನೆಂದರೆ ದಿನಾಲು ಈ ಹಾಜರಿ ಪುಸ್ತಕದ ತಪಾಸಣೆಯನ್ನು ಜನರೇ ಮಾಡುತ್ತಾರೆ. ಇದು ಕಾಯ್ದೆಯ ಸೂತ್ರಗಳಲ್ಲಿ ಒಂದಾಗಿದೆ. ಇದರಿಂದ ಭ್ರಷ್ಟಾಚಾರ ನಿರ್ಮೂಲನೆ ಸಮರ್ಪಕವಾಗಿ ಮೂಡಿಬಂದಂತಾಗಿದೆ. ದುರದೃಷ್ಟವಶಾತ್ ಸೋರಿಕೆ ಅಂಶದ ಗಾತ್ರವನ್ನು ವಿಲ್ಲುಪುರಂನಲ್ಲಿ ನೋಡಲು ಲಭ್ಯವಾಗಲಿಲ್ಲ. ಯಾಕೆಂದರೆ ಇಲ್ಲಿ ವ್ಯವಸ್ಥಿತವಾದ ಹಾಜರಿ ಪುಸ್ತಕ ತಪಾಸಣೆ ಮಾಡುವ ಕ್ರಮಗಳು ಇರಲಿಲ್ಲ.

ಆಂಧ್ರಪ್ರದೇಶಕ್ಕೆ ತಂಡ ನೀಡಿದ ಭೇಟ್ಟಿಯ ಸಂದರ್ಭದಲ್ಲಿ ಉದ್ಯೋಗ ಖಾತರಿ ಕಾಯ್ದೆಯಡಿಯಲ್ಲಿನ ಭ್ರಷ್ಟಾಚಾರ ತಡೆಗೆ ಕೈಗೊಂಡ ಹಲವಾರು ಕ್ರಮಗಳು ಗೋಚರಿಸಿದವು. ಆಂಧ್ರಪ್ರದೇಶ ಸರಕಾರ ಈ ಕಾಯ್ದೆಯಡಿ ನಡೆಯುವ ಕಾಮಗಾರಿಗಳ ಕೂಲಿಯನ್ನು ಅಂಚೆ ಕಛೇರಿಯ ಮೂಲಕ ಪಾವತಿಸುವ ದೃಢ ನಿರ್ಧಾರ ಕೈಗೊಂಡಿದೆ. ಕೆಲಸ ನಿರ್ವಹಿಸುವ ಸಂಸ್ಥೆಯಿಂದ ಕೂಲಿ ನೀಡುವ ಸಂಸ್ಥೆಯನ್ನು ಬೇರ್ಪಡಿಸಲಾಗಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ನಿರ್ದೇಶನಾ ಸೂಚನೆಗಳಲ್ಲಿ ಇದು ಒಂದಾಗಿದೆ. ಇದರಿಂದಾಗಿ ಕೆಲಸ ನಿರ್ವಹಿಸುವ ಸಂಸ್ಥೆಗಳ ಬಳಿ ಯಾವುದೇ ಹಣಕಾಸಿನ ವಿಷಯಗಳು ಇರುವದಿಲ್ಲವಾದ್ದರಿಂದ ಇಲ್ಲಿ ಭ್ರಷ್ಟಾಚಾರಕ್ಕೆ ಅವಕಾಶವಿಲ್ಲ. ಇದಲ್ಲದೆ ಆಂಧ್ರಪದೇಶ ಸರ್ಕಾರವು ನಿಯಮಿತವಾಗಿ ಸಾಮಾಜಿಕ ಪರಿಶೋಧನಾ ಕ್ರಮವನ್ನು ನಡೆಸುವ ವ್ಯವಸ್ಥೆಯನ್ನು ರೂಪಿಸಿದೆ. ಕೆಲವೊಂದು ಸಣ್ಣಪುಟ್ಟ ಲೋಪದೋಷಗಳನ್ನು ಬಿಟ್ಟರೆ ಭಾರಿ ಪ್ರಮಾಣದ ಭ್ರಷ್ಟಾಚಾರ ಕಂಡುಬಂದಿಲ್ಲ. ಇಂತಹ ಸಕಾರಾತ್ಮಕ ಅಂಶಗಳಿಂದ ಪ್ರೇರಿತರಾದ ತನಿಖಾ ತಂಡವು ಓರಿಸ್ಸಾ ರಾಜ್ಯಕ್ಕೆ ಭೆಟ್ಟಿ ನೀಡಿದಾಗ ಮಹಾದಾಶ್ಚರ್ಯ ಉಂಟಾಯಿತು. ಅಕ್ಟೋಬರ್ ೨೦೦೭ ರಲ್ಲಿ ಉದ್ಯೋಗ ಪಟ್ಟಿಗಳನ್ನು ಪರಿಶೀಲಿಸುವ ಕಾರ್ಯವನ್ನು ತಂಡ ಕೈಗೆತ್ತಿಕೊಂಡಿತು. ಮಹಾಲೇಖಪಾಲರ ತನಿಖೆಯು ಬೋಲಾಂಗಿರ್, ಕಾಳಹಂಡಿ ಜಿಲ್ಲೆಗಳಲ್ಲಿ ನಡೆಯಿತು. ಓರಿಸ್ಸಾ ರಾಜ್ಯವು ಹಿಂದಿನಿಂದ ಬಂದ ಭ್ರಷ್ಟಾಚಾರವನ್ನು ಮೀರಿ ಹೋಗಿರಲೇ ಇಲ್ಲ. ಸಾರ್ವಜನಿಕ ಕೆಲಸಗಳು ಖಾಸಗಿ ಗುತ್ತಿಗೆದಾರರು ಉದ್ಯೋಗ ಪಟ್ಟಿಗಳಲ್ಲಿ ಸಾರಾಸಗಟಾಗಿ ಮೋಸ ಮತ್ತು ಲಂಚದ ವಿಕಾರರೂಪ ಹಿಂದಿನಂತೆಯೆ ಇರುವುದು ಕಾಣಬಂದಿತು. ಪಾರದರ್ಶಕತೆ ಇರಲೇ ಇಲ್ಲ. ಪಾರದರ್ಶಕತೆಗಾಗಿ ಹಮ್ಮಿಕೊಂಡ ಕ್ರಮಗಳನ್ನು ಪಟ್ಟಭದ್ರ ಹಿತಾಸಕ್ತಿಗಳು ಹಾಳುಗೆಡವಿದ್ದವು. ಭ್ರಷ್ಟಾಚಾರ ವಿಷಯದಲ್ಲಿ ಹೆಸರು ಕೆಡಿಸಿಕೊಂಡ ಓರಿಸ್ಸಾ ರಾಜ್ಯವು ಭ್ರಷ್ಟಾಚಾರ ನಿರ್ಮೂಲನೆಗೆ ಕೆಲವು ಕ್ರಮಗಳನ್ನು ಕೈಕೊಂಡಿದೆ.

ಡಿಸೆಂಬರ್ ೨೦೦೭ ರಲ್ಲಿ ಹಿಮಾಚಲ ಪ್ರದೇಶದ ಕಾಂಗ್ರಾ ಮತ್ತು ಶಿರಮೌರ್ ಜಿಲ್ಲೆಗಳಲ್ಲಿ ನಡೆಸಿದ ಸಮೀಕ್ಷೆಯಲ್ಲಿ ಸರಕಾರಿ ಕಡತಗಳಲ್ಲಿ ಪಾರದರ್ಶಕತೆ ಕಾಣಬಂದಿತು. ಗ್ರಾಮ ಪಂಚಾಯತಿ ಕಛೇರಿಗಳಲ್ಲಿ ಕಂಪ್ಯೂಟರ್‌ನಲ್ಲಿ ಎಲ್ಲ ದಾಖಲೆಗಳು ಸಾರ್ವಜನಿಕ ವೀಕ್ಷಣೆಗೆ ಲಭ್ಯವಿದ್ದಿತು. ಮಿಂಟಾ ಎಂಬ ಗ್ರಾಮ ಪಂಚಾಯತಿಯನ್ನು ಬಿಟ್ಟರೆ ಉಳಿದಂತೆ ದಾಖಲೆಗಳಿಗೂ ಮತ್ತು ಕೂಲಿ ಕಾರ್ಮಿಕರ ಹೇಳಿಕೆಗಳಿಗೂ ಸಾಮ್ಯತೆ ಇತ್ತು.

ಆದರೆ ಶಿರಮೌರ್‌ನಲ್ಲಿ ಕೆಲವು ಹಣ ದುರುಪಯೋಗದ ಪ್ರಕರಣಗಳು ಕಂಡುಬಂದವು. ಕೆಲವೆಡೆ ಕಾರ್ಯಕ್ರಮದ ಇತರ ಸೌಕರ್ಯಗಳಿಗಾಗಿ ಹಣವನ್ನು ದುರ್ಬಳಕೆ ಮಾಡಿಕೊಂಡಿದ್ದು ಗೋಚರಿಸಿತು.

ಈಗ ದೊರೆತಿರುವ ಅಂಶಗಳನ್ನು ಇನ್ನೂ ಹೆಚ್ಚಿನ ತನಿಖೆಗೆ ಒಳಪಡಿಸುವ ಅವಶ್ಯಕತೆ ಇದೆ. ಈ ಬಗೆಯ ಸಣ್ಣ ಪ್ರಮಾಣದ ಸಮೀಕ್ಷೆಗಳು ಉತ್ತಮವಾದ ಒಳನೋಟವನ್ನು ಒದಗಿಸುತ್ತವೆ. ಅಗತ್ಯವಾದ ಮಾಹಿತಿಗಳು ಕೇಳಿದಾಗ ದೊರಕುತ್ತವೆ. ಈ ಕಾಯ್ದೆಯಡಿ ಹಣಕಾಸಿನ ದುರ್ಬಳಕೆಯಾಗುತ್ತಿದೆ ಎಂಬ ಆರೋಪಗಳಿಗೆ ಈ ಸಮೀಕ್ಷೆಗಳು ಉತ್ತರ ನೀಡುತ್ತವೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ದೊರೆಯುವ ಉದ್ಯೋಗದಿಂದ ಫಲಾನುಭವಿಗಳಿಗೆ ಆಹಾರ, ಮಕ್ಕಳಿಗೆ ಬಟ್ಟೆಬರೆ ಜೊತೆಗೆ ಗೌರವಯುತ ಬದುಕು ಇವುಗಳನ್ನು ಕುರಿತು ಜನರು ಆಡಿದ ಮಾತುಗಳು ಎಂಥವರನ್ನೂ ತೃಪ್ತಿಪಡಿಸುತ್ತವೆ. ಈ ಎಲ್ಲ ತನಿಖೆಯ ಹಿಂದೆ ಒಂದು ಪಾಠವಿದೆ. ಅದೆಂದರೆ, ಕಾಯ್ದೆಯಲ್ಲಿ ಹೇಳಿರುವ ಕ್ರಮಗಳನ್ನು ಸರಿಯಾಗಿ ಕೈಗೊಂಡರೆ ಪಾರದರ್ಶಕತೆ ಉಂಟಾಗಿ ಭ್ರಷ್ಟಾಚಾರ ತೊಡೆದು ಹೋಗುತ್ತದೆ ಎಂಬುದು. ಭ್ರಷ್ಟಾಚಾರ ಗೋಚರಿಸಿದ ತಕ್ಷಣವೇ ಕ್ರಮ ಕೈಕೊಂಡು ಕಿತ್ತು ಹಾಕುವುದು ಎಲ್ಲರ ಜವಾಬ್ದಾರಿಯಾಗಿದೆ.

# ಅಧ್ಯಾಯ ನಾಲ್ಕು
# ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶಗಳು ಮತ್ತು ಕಾರ್ಯಕ್ರಮಗಳು

# ಅಧ್ಯಾಯ ನಾಲ್ಕು
# ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶಗಳು ಮತ್ತು ಕಾರ್ಯಕ್ರಮಗಳು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ದೇಶದ ವಿವಿಧ ರಾಜ್ಯಗಳು ಅನುಷ್ಠಾನಗೊಳಿಸುತ್ತಿದ್ದು, ಪ್ರಾದೇಶಿಕ ಭಿನ್ನತೆ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಅಧಿನಿಯಮಕ್ಕೆ ಪೂರಕವಾಗಿ ನಿಯಮಗಳನ್ನು ರೂಪಿಸಿಕೊಂಡಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ' ಎಂಬ ಹೆಸರಿನಲ್ಲಿ ದಿನಾಂಕ : ೦೮-೦೨-೨೦೦೭ ರ ಕರ್ನಾಟಕ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಿದೆ. ಅಂದಿನಿಂದ 'ರಾಷ್ಟ್ರೀಯ ಗ್ರಾಮೀಣ ಖಾತರಿ ಯೋಜನೆ - ಕರ್ನಾಟಕ' ಜಾರಿಗೊಂಡಿದೆ.

ಮೊದಲ ಹಂತದಲ್ಲಿ, ರಾಜ್ಯದ ೫ ಜಿಲ್ಲೆಗಳ ೩೨ ತಾಲ್ಲೂಕುಗಳನ್ನು ಡಾ॥ ನಂಜುಡಪ್ಪ ವರದಿಯ ಸೂಚ್ಯಂಕದ ಆಧಾರದಂತೆ ಆಯ್ಕೆ ಮಾಡಲಾಗಿದೆ. ರಾಜ್ಯದ ಬೀದರ್, ಗುಲ್ಬರ್ಗಾ, ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ೨೦೦೬-೦೭ ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗಿದೆ. ಮುಂದುವರೆದು ೨೦೦೭-೦೮ ರ ಆರ್ಥಿಕ ವರ್ಷದಿಂದ ಎರಡನೆ ಹಂತದಲ್ಲಿ ಹಾಸನ, ಕೊಡಗು, ಚಿಕ್ಕಮಗಳೂರು, ಶಿವಮೊಗ್ಗ, ಬೆಳಗಾವಿ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟಾರೆ ರಾಜ್ಯದ ೧೧ ಜಿಲ್ಲೆಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಿ ಈಗ ಮತ್ತೆ ಉಳಿದ ೧೮ ಜಿಲ್ಲೆಗಳಲ್ಲಿ ಈ ಯೋಜನೆ ದಿನಾಂಕ : ೧೧-೦೪-೨೦೦೮ ರಿಂದ ಜಾರಿಗೆ ಬಂದಿದೆ.

**೪.೧ ಉದ್ದೇಶಗಳು**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮುಖ್ಯ ಉದ್ದೇಶಗಳೆಂದರೆ -

೧. ಸ್ವಇಚ್ಛೆಯಿಂದ ಅರ್ಜಿ ಸಲ್ಲಿಸುವ, ಅಕುಶಲ ದೈಹಿಕ ಕೆಲಸ ಬಯಸುವ, ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರಿಗೆ ಪ್ರತಿ ಕುಟುಂಬದ ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವುದು.

೨. ಗ್ರಾಮೀಣ ಜನರಿಗೆ ದೀರ್ಘಕಾಲದ ಜೀವನೋಪಾಯದ ಮಾರ್ಗಗಳನ್ನು ಬಲಪಡಿಸುವುದು.

ಗ್ರಾಮೀಣ ಬಡಜನರ ಜೀವನ ಭದ್ರತೆಗಾಗಿ ಅವರು ಕೆಲಸಕ್ಕೆ ಬೇಡಿಕೆ ಸಲ್ಲಿಸಿದಾಗ ಅವರಿಗೆ ಕೂಲಿ ಒದಗಿಸಬೇಕೆಂಬುದು ಕಾರ್ಯಕ್ರಮದ ಮೂಲ ಉದ್ದೇಶ. ಜೊತೆಗೆ ಸಮರ್ಪಕವಾದ ಕಾಮಗಾರಿಗಳನ್ನು ಆಯ್ಕೆ ಮಾಡುವುದರ ಮೂಲಕ ಸಮುದಾಯದ ಮತ್ತು ವೈಯಕ್ತಿಕ ಆಸ್ತಿಗಳು ರೂಪಿತಗೊಂಡು ಸ್ಥಳೀಯ ಸಂಪತ್ತು ಮತ್ತು ಸೌಲಭ್ಯಗಳು ಊರ್ಜಿತಗೊಳ್ಳಬೇಕೆಂಬ ಮುನ್ನೆಚ್ಚರಿಕೆಯು ಇದರಲ್ಲಿದೆ. ನೀರು ಮೂಲಗಳ ಪೂರಣ, ಕಾಡು

ಬೆಳೆಸುವಿಕೆ ಕಾಮಗಾರಿಗಳಿಂದ ಪರಿಸರದ ಮೇಲೆಯೂ ಸತ್ಪರಿಣಾಮವಾಗುತ್ತದೆ. ಸ್ಥಳೀಯವಾಗಿ ಪರ್ಯಾವರಣ ಒಳ್ಳೆಯದಾಗುವುದರ ಜೊತೆ ಜೊತೆಯಲ್ಲಿ ಹಸಿರೆಲೆ ಗೊಬ್ಬರ, ಜೈವಿಕ ತೈಲ ಉತ್ಪತ್ತಿ, ಪೌಷ್ಟಿಕ ಆಹಾರ, ವರ್ಷವಿಡೀ ಸಂಪರ್ಕಾನುಕೂಲ ಇತ್ಯಾದಿ ಬಹುಮುಖಿ ಅನುಕೂಲಗಳು ಸಮುದಾಯಗಳಿಗೆ ಲಭ್ಯವಾಗುತ್ತದೆ ಅಲ್ಲದೆ ಕುಟುಂಬಗಳಿಗೆ ಮಹಿಳೆಯರ ಆರ್ಥಿಕ ಸಬಲೀಕರಣ, ಸಂಕಷ್ಟ ಕಾಲದ ವಲಸೆಯಿಂದುಂಟಾಗುವ ಮಾನಸಿಕ ಒತ್ತಡದ ನಿವಾರಣೆ ಮುಂತಾದ ಅಭ್ಯುದಯ ಪರಿಣಾಮಗಳು ತನ್ನಿಂದ ತಾನೆ ಅನಾವರಣಗೊಳ್ಳುತ್ತವೆ.

**೪.೨ ಫಲಾನುಭವಿಗಳ ಹಕ್ಕುಗಳು ಮತ್ತು ಅಧಿಕಾರಗಳು**

ಈ ಯೋಜನೆಯಡಿಯಲ್ಲಿ ತೊಡಗಿಸಿಕೊಳ್ಳುವ ಕೂಲಿ ಕಾರ್ಮಿಕರಿಗೆ ಕೆಳಕಂಡ ಹಕ್ಕುಗಳು ಮತ್ತು ಅಧಿಕಾರಗಳನ್ನು ನೀಡಲಾಗಿದೆ.

- ಕುಟುಂಬದ ಉದ್ಯೋಗ ಚೀಟಿಯಲ್ಲಿ ಹೆಸರಿರುವ ಆ ಕುಟುಂಬದ ಎಲ್ಲಾ ವಯಸ್ಕರು, ಅಕುಶಲ ದೈಹಿಕ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.
- ಒಂದು ಆರ್ಥಿಕ ವರ್ಷದಲ್ಲಿ ಒಂದು ಕುಟುಂಬ ೧೦೦ ಮಾನವ ದಿನಗಳ ಅಕುಶಲ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.
- ಅರ್ಜಿದಾರರು ಉದ್ಯೋಗ ಕೋರಿದ ೧೫ ದಿನಗಳೊಳಗಾಗಿ ಉದ್ಯೋಗ ಒದಗಿಸದಿದ್ದಲ್ಲಿ ಆರ್ಥಿಕ ವರ್ಷದ ಮೊದಲ ೩೦ ದಿನಗಳಿಗೆ ಕೂಲಿಯ ಶೇ. ೨೫ ರಷ್ಟು ಮತ್ತು ಉಳಿದ ಅವಧಿಗೆ ಕೂಲಿಯ ಶೇ. ೫೦ ರಷ್ಟನ್ನು ನಿರುದ್ಯೋಗ ಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ಸಾಧ್ಯವಾದಷ್ಟು ಮಟ್ಟಿಗೆ ಕೆಸಲವನ್ನು ಆ ಗ್ರಾಮದ ವ್ಯಾಪ್ತಿಯಲ್ಲಿ ಒದಗಿಸಬೇಕು. ಕೆಲಸಗಾರರು ವಾಸವಿರುವ ಗ್ರಾಮದಿಂದ ೫ ಕಿ.ಮೀ.ಗಿಂತ ಹೆಚ್ಚಿನ ದೂರದಲ್ಲಿ ಕೆಲಸವನ್ನು ಒದಗಿಸಿದ್ದೇ ಆದರೆ, ಕೂಲಿಯ ಶೇ. ೧೦ ರಷ್ಟನ್ನು ಹೆಚ್ಚುವರಿಯಾಗಿ ಸಾರಿಗೆ ಮತ್ತು ಜೀವನ ವೆಚ್ಚಕ್ಕಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ಕೆಲಸ ಕೋರುವ ನೋಂದಾಯಿತ ಅರ್ಜಿದಾರರ ಪೈಕಿ ಕನಿಷ್ಠ ೧/೩ ರಷ್ಟಿರುವಂತೆ ಮಹಿಳೆಯರಿಗೆ ಆದ್ಯತೆ ಮೇರೆ ಉದ್ಯೋಗ ಒದಗಿಸಬೇಕು.
- ೧೫ ದಿನಗಳೊಳಗಾಗಿ ಕೂಲಿಯನ್ನು ಪಾವತಿಸದಿದ್ದಲ್ಲಿ, ಅವರು ಕೂಲಿ ಪಾವತಿ ಅಧಿನಿಯಮ ೧೯೩೬ ರ ಅನ್ವಯ ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ಸಮಾನ ವೇತನ ಅಧಿನಿಯಮ ೧೯೭೬ ರನ್ವಯ ಲಿಂಗಾಧಾರಿತ ತಾರತಮ್ಯ ಮಾಡತಕ್ಕದ್ದಲ್ಲ.
- ಕಾಮಗಾರಿಯ ಸ್ಥಳದ ಸಮೀಪ ಕೂಲಿ ಕಾರ್ಮಿಕರು ಹಾಗೂ ಮಕ್ಕಳ ವಿಶ್ರಾಂತಿ ಪಡೆಯಲು ನೆರಳು ಮತ್ತು ಸ್ವಚ್ಛವಾದ ಕುಡಿಯುವ ನೀರಿನ ವ್ಯವಸ್ಥೆ ಮಾಡುವುದು.
- ಕೆಲಸದ ಅವಧಿಯಲ್ಲಿ ಉಂಟಾಗಬಹುದಾದ ಸಣ್ಣಪುಟ್ಟ ಗಾಯಗಳಿಗಾಗಿ ಚಿಕಿತ್ಸೆ ನೀಡಲು ಪ್ರಥಮ ಚಿಕಿತ್ಸೆ ಪೆಟ್ಟಿಗೆಯನ್ನು ಒದಗಿಸಬೇಕು.

- ಕಾಮಗಾರಿಯ ಸ್ಥಳಕ್ಕೆ ಆರು ವರ್ಷಕ್ಕೂ ಕಡಿಮೆ ವಯಸ್ಸಿನ ಐದು ಅಥವಾ ಅದಕ್ಕಿಂತ ಹೆಚ್ಚಿನ ಮಕ್ಕಳು ಕಾರ್ಮಿಕರೊಂದಿಗೆ ಬಂದಲ್ಲಿ ಅವರನ್ನು ನೋಡಿಕೊಳ್ಳಲು ಕಾರ್ಮಿಕರ ಪೈಕಿ ಒಬ್ಬ ಮಹಿಳೆಯನ್ನು ನೇಮಿಸಬೇಕು ಮತ್ತು ಒಂದು ದಿನದ ಕನಿಷ್ಠ ಕೂಲಿಯನ್ನು ಆ ಮಹಿಳೆಗೆ ಪಾವತಿಸಬೇಕು.
- ಕಾಮಗಾರಿಯ ಸ್ಥಳದಲ್ಲಿ ಕಾಮಗಾರಿಗೆ ಸಂಬಂಧಸಿದಂತೆ ಕಾರ್ಮಿಕರಿಗೆ ಗಾಯಗಳಾದಲ್ಲಿ ಉಚಿತ ವೈದ್ಯಕೀಯ ಚಿಕಿತ್ಸೆ ನೀಡಬೇಕು.
- ಕಾಮಗಾರಿ ಸಂಬಂಧ ಯಾವುದೇ ಕಾರ್ಮಿಕರಿಗೆ ಗಾಯಗಳಿಗಾಗಿ ಆಸ್ಪತ್ರೆಗೆ ದಾಖಲಾಗಬೇಕಾದ ಅಗತ್ಯ ಕಂಡುಬಂದಲ್ಲಿ ಅವರು ಔಷಧಿ, ವೈದ್ಯಕೀಯ ಚಿಕಿತ್ಸೆ, ವಸತಿ, ಇತ್ಯಾದಿ ಉಚಿತ ವೈದ್ಯಕಿಯ ಸೌಲಭ್ಯಗಳನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ಕಾಮಗಾರಿಯ ಕಾರಣದಿಂದಾಗಿ ಕಾರ್ಮಿಕರು ಶಾಶ್ವತವಾಗಿ ಅಂಗವಿಕಲರಾದರೆ ಅಥವಾ ಮೃತಪಟ್ಟರೆ ಸಂದರ್ಭಕ್ಕೆ ತಕ್ಕಂತೆ ಅವರು ಅಥವಾ ಅವರ ವಾರಸುದಾರರು ರೂ. ೨೫,೦೦೦/- ಅಥವಾ ಕೇಂದ್ರ ಸರ್ಕಾರ ನಿಗಧಿಪಡಿಸಬಹುದಾದ ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ಕಾಮಗಾರಿಯ ಸ್ಥಳದಲ್ಲಿ ಇರುವ ಮಕ್ಕಳಿಗೆ ಗಾಯಗಳಾದಲ್ಲಿ, ಶಾಶ್ವತ ಅಂಗವಿಕಲತೆಯಾದಲ್ಲಿ ಅಥವಾ ಮೃತಪಟ್ಟಲ್ಲಿ ಅವರೂ ಸಹ ಮೇಲಿನಂತೆ ಚಿಕಿತ್ಸೆ ಮತ್ತು ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

**೪.೩ ಫಲಾನುಭವಿಗಳ ಆಯ್ಕೆ ವಿಧಾನ**

**೧. ನೋಂದಣಿ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೆಲಸ ಮಾಡಲು, ಕುಟುಂಬದ ವಯಸ್ಕ ಸದಸ್ಯರ ಪೈಕಿ ಯಾರಾದರೂ ತಾವು ವಾಸವಿರುವ ಗ್ರಾಮ ಪಂಚಾಯಿತಿಗೆ ನಮೂನೆ - ೧ ರಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿ ಸಲ್ಲಿಸಬೇಕು. ಹಾಗೆ ಸಲ್ಲಿಸುವ ಅರ್ಜಿಯಲ್ಲಿ ಕುಟುಂಬದ ವಯಸ್ಕ ಸದಸ್ಯರ ಹೆಸರು, ವಯಸ್ಸು, ವಿಳಾಸ ಇತ್ಯಾದಿ ವಿವರಗಳು ಇರಬೇಕು. ಅರ್ಜಿದಾರರಿಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು, ದಿನಾಂಕ ಸೂಚಿಸುವ ಸ್ವೀಕೃತಿ ನೀಡಿ, ವಿವರಗಳನ್ನು ಅರ್ಜಿಗಳ ನೋಂದಣಿ ವಹಿ (ನಮೂನೆ - ೨) ಮತ್ತು ಉದ್ಯೋಗಕಾಂಕ್ಷಿಗಳ ಹಾಗೂ ಉದ್ಯೋಗದ ವಹಿ (ನಮೂನೆ - ೩) ಯಲ್ಲಿ ದಾಖಲಿಸಬೇಕು. ಉದ್ಯೋಗಕ್ಕಾಗಿ ಮಾಡಿದ ನೋಂದಣಿ ಐದು ವರ್ಷದವರೆಗೆ ಚಾಲ್ತಿಯಲ್ಲಿರುತ್ತದೆ. ಗ್ರಾಮ ಪಂಚಾಯಿತಿಗೆ ಅವಶ್ಯವೆನಿಸಿದಾಗ ತದನಂತರದಲ್ಲಿ ಉದ್ಯೋಗ ಚೀಟಿಯನ್ನು ನವೀಕರಿಸಬಹುದಾಗಿರುತ್ತದೆ ಅಥವಾ ಇಲ್ಲವಾದಲ್ಲಿ ಇದನ್ನೇ ಮುಂದುವರೆಸಬಹುದಾಗಿರುತ್ತದೆ.

**೨. ಉದ್ಯೋಗ ಚೀಟಿ ವಿತರಣೆ**

ಅಗತ್ಯ ವಿಚಾರ ಮಾಡಿ ನೋಂದಾಯಿತ ಪ್ರತಿ ಕುಟುಂಬಕ್ಕೆ ಪ್ರತ್ಯೇಕ ಸಂಖ್ಯೆ ಇರುವ ಕುಟುಂಬದ ಉದ್ಯೋಗ ಚೀಟಿಯನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ನಮೂನೆ - ೪ ರಲ್ಲಿರುವಂತೆ ವಿತರಿಸಬೇಕು. ವಿವರಗಳನ್ನು ಕುಟುಂಬ ಉದ್ಯೋಗ ಚೀಟಿ ನೀಡಿದ ಒಂದು ತಿಂಗಳೊಳಗಾಗಿ ಕುಟುಂಬದ ನೋಂದಾಯಿತ ಪ್ರತಿ ಸದಸ್ಯರ ಸ್ಟಾಂಪ್ ಅಳತೆಯ ಭಾವಚಿತ್ರವನ್ನು ಉದ್ಯೋಗ ಚೀಟಿಯಗೆ ಅಂಟಿಸಬೇಕು ಮತ್ತು ನೀಡಿದ ಕೂಲಿಯ ದಿನಗಳ ಹಾಗೂ ಪವಾತಿಸಿದ ಕೂಲಿಯ ವಿವರಗಳನ್ನು ಕುಟುಂಬ ಉದ್ಯೋಗ ಚೀಟಿ (ನಮೂನೆ - ೪) ಹಾಗೂ ಉದ್ಯೋಗಾಕಾಂಕ್ಷಿಗಳ ಮತ್ತು ಉದ್ಯೋಗದ ವಹಿ (ನಮೂನೆ - ೩) ಯಲ್ಲಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಆಗಿಂಗಾಗ್ಗೆ ದಾಖಲಿಸಬೇಕು.

ಕೆಲವು ಸಂದರ್ಭಗಳಲ್ಲಿ ಕಾರಣಾಂತರ ಮೂಲ ಉದ್ಯೋಗ ಚೀಟಿ ಕಳೆದುಹೋದಲ್ಲಿ ಅಥವಾ ಹರಿದುಹೋದಲ್ಲಿ ಉದ್ಯೋಗ ಚೀಟಿ ನಕಲಿಗಾಗಿ ಗ್ರಾಮ ಪಂಚಾಯಿತಿಗೆ ನಿಗದಿತ ಶುಲ್ಕ ಪಾವತಿ ಅರ್ಜಿ ಸಲ್ಲಿಸಬಹುದು. ಅರ್ಜಿ ಸಲ್ಲಿಸಿದ ಏಳು ದಿನಗಳೊಳಗಾಗಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಅರ್ಜಿಯನ್ನು ಪರಿಶೀಲಿಸಿ ಉದ್ಯೋಗ ಚೀಟಿಯ ನಕಲು ಪ್ರತಿಯನ್ನು ಅರ್ಜಿದಾರರಿಗೆ ವಿತರಿಸಬೇಕು. ಹೆಚ್ಚುವರಿ ಸದಸ್ಯರನ್ನು ಉದ್ಯೋಗ ಚೀಟಿಯಲ್ಲಿ ಸೇರಿಸುವ ಅಥವಾ ತೆಗೆದುಹಾಕುವ ಕಾರ್ಯವನ್ನು ಅಗತ್ಯವಿದ್ದಾಗಲೆಲ್ಲಾ ಮಾಡಬೇಕು ಮತ್ತು ಈ ರೀತಿ ಪರಿಷ್ಕರಿಸಿದ ಪಟ್ಟಿಯನ್ನು ಪ್ರತಿ ತಿಂಗಳು ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಿಕೊಡಬೇಕು. ಉದ್ಯೋಗಕಾಂಕ್ಷಿಯು ತಪ್ಪು ಮಾಹಿತಿ ನೀಡಿ ನೋಂದಾಯಿಸಿಕೊಂಡಿದ್ದಲ್ಲಿ, ಗ್ರಾಮ ಪಂಚಾಯಿತಿಯು ಅವರ ಹೇಳಿಕೆಗೆ ಅವಕಾಶ ನೀಡಿ, ನಂತರ ಉದ್ಯೋಗ ಚೀಟಿಯನ್ನು ಹಿಂತಿರುಗಿಸಲು ಹಾಗೂ ವಜಾಗೊಳಿಸಲು ಕಾರ್ಯಕ್ರಮ ಅಧಿಕಾರಿಗೆ ವರದಿ ನೀಡಬೇಕು.

ಕಾರ್ಯಕ್ರಮ ಅಧಿಕಾರಿ/ಗ್ರಾಮ ಪಂಚಾಯಿತಿಯು ನಿಗದಿಪಡಿಸಿದ ಯಾವುದೇ ಕೆಲಸವನ್ನು ಉದ್ಯೋಗಕಾಂಕ್ಷಿಯು ತಿರಸ್ಕರಿಸುವಂತಿಲ್ಲ.

**೩. ಕೆಲಸಕ್ಕಾಗಿ ಅರ್ಜಿ ಹಾಗೂ ಉದ್ಯೋಗ ನೀಡಿಕೆ**

ಉದ್ಯೋಗ ಚೀಟಿ ಹೊಂದಿರುವವರು ವೈಯಕ್ತಿಯವಾಗಿ ಅಥವಾ ಒಟ್ಟಾಗಿ ಉದ್ಯೋಗದ ಬೇಡಿಕೆಯ ವಿವರಗಳನ್ನು ನಮೂನೆ - ೬ ರಲ್ಲಿ ದ್ವಿಪ್ರತಿಯಲ್ಲಿ ದಾಖಲಿಸಿ ಕೆಲಸಕ್ಕಾಗಿ ಅರ್ಜಿ ಸಲ್ಲಿಸಬೇಕು. ಒಂದು ಆರ್ಥಿಕ ವರ್ಷದಲ್ಲಿ ನಿಗದಿತ ಅವಧಿಗೆ ಉದ್ಯೋಗವನ್ನು ಕೋರಿ ಮುಂಗಡ ಅರ್ಜಿಯನ್ನು ಸಹ ಸಲ್ಲಿಸಬಹುದು. ಒಬ್ಬನೇ ವ್ಯಕ್ತಿ ಅಥವಾ ಒಂದು ಗುಂಪು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಒಮ್ಮೆಗೆ ಸಲ್ಲಿಸಬಹುದು. ಆದರೆ ಇವುಗಳಲ್ಲಿನ ಉದ್ಯೋಗ ಬೇಡಿಕೆಯ ಅವಧಿಯು ಪ್ರತ್ಯೇಕವಾಗಿರಬೇಕು.

ನಮೂನೆ - ೬ ರಲ್ಲಿ ದ್ವಿಪ್ರತಿಯಲ್ಲಿ ಉದ್ಯೋಗಕ್ಕಾಗಿ ಸಲ್ಲಿಸಿದ ಅರ್ಜಿಗಳನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಸ್ವೀಕರಿಸಿ, ಅರ್ಜಿದಾರರಿಗೆ ಸ್ವೀಕೃತ ನೀಡಬೇಕು. ಕನಿಷ್ಠ ಸತತ

ಹದಿನಾಲ್ಕು ದಿವಸಗಳೇಗೆ ಅರ್ಜಿದಾರರು ಕೆಲಸ ಕೇಳಬೇಕು. ಉದ್ಯೋಗಕ್ಕಾಗಿ ಸಲ್ಲಿಸಿದ ಅರ್ಜಿಗಳನ್ನು ಉದ್ಯೋಗ ಬೇಡಿಕೆ ವಹಿ ನಮೂನೆ - ೭ ರಲ್ಲಿ ದಾಖಲಿಸಬೇಕು. ಉದ್ಯೋಗ ಕೋರಿ ಅರ್ಜಿ ಸಲ್ಲಿಸಿದ ದಿನಾಂಕದಿಂದ ೧೫ ದಿನಗಳು ಅಥವಾ ಉದ್ಯೋಗ ಕೋರಿದ ದಿನಾಂಕ ಇವುಗಳ ಪೈಕಿ ಯಾವುದು ನಂತರವೋ ಅಷ್ಟರೊಳಗಾಗಿ ಕೆಲಸ ನೀಡಬೇಕು. ಚಾಲ್ತಿಯಲ್ಲಿರುವ ಅಥವಾ ಹೊಸದಾಗಿ ಪ್ರಾರಂಭಿಸುವ ಕಾಮಗಾರಿಗಳಲ್ಲಿ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿದವರಿಗೆ ಗ್ರಾಮ ಪಂಚಾಯಿತಿ ಉದ್ಯೋಗ ನೀಡಿ ನಮೂನೆ - ೮ ರಲ್ಲಿ ನೋಟೀಸನ್ನು ಜಾರಿ ಮಾಡಬೇಕು. ಉದ್ಯೋಗ ನೀಡಿದ ವಿವರವನ್ನು ನಮೂನೆ - ೩ ರಲ್ಲಿ ಸಾರ್ವಜನಿಕ ತಿಳಿವಳಿಕೆಗಾಗಿ ಪ್ರಚುರಪಡಿಸಬೇಕು. ಅಂಗವಿಕಲ ವ್ಯಕ್ತಿಗಳ ಯೋಜನೆಯ ಭಾಗವಾಗಿರುವ ಹಾಗೂ ಸೂಕ್ತವಿರುವ ಕೂಲಿ ಕೆಲಸಗಳನ್ನು ವಹಿಸಬೇಕು.

ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅರ್ಜಿದಾರರಿಗೆ ಕೆಲಸವನ್ನು ಕೊಡಲು ಸಾಧ್ಯವಾಗದಿದ್ದಲ್ಲಿ ಅವರ ಅರ್ಜಿಗಳನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯು ಆ ತಾಲ್ಲೂಕಿನಲ್ಲಿ ಇತರೆ ಗ್ರಾಮ ಪಂಚಾಯಿತಿಯಲ್ಲಿ ಲಭ್ಯವಿರಬಹುದಾದ ಕೆಲಸಕ್ಕ ಇವರನ್ನು ತೊಡಗಿಸಲು ಅಗತ್ಯವಿರುವ ಸಮನ್ವಯತೆ ಮಾಡಿ, ಉದ್ಯೋಗ ನೀಡಿಕೆ ಪತ್ರವನ್ನು ಹೊರಡಿಸಿ ಅದನ್ನು ಸಂಬಂಧಿಸಿದ ಎರಡು ಗ್ರಾಮ ಪಂಚಾಯಿತಿಗಳ ಕಾರ್ಯದರ್ಶಿಗಳಿಗೆ ಕಳುಹಿಸಿಕೊಡಬೇಕು.

**೪. ಕಡ್ಡಾಯವಾಗಿ ಪಾಲಿಸಬೇಕಾದ ಅಂಶಗಳು**

ಒಂದು ಆರ್ಥಿಕ ವರ್ಷದಲ್ಲಿ ಉದ್ಯೋಗ ಬಯಸುವ ಪ್ರತಿ ನೋಂದಾಯಿತ ಕುಟುಂಬಕ್ಕೆ ೧೦೦ ದಿನಗಳಿಗೆ ಕಡಿಮೆ ಇಲ್ಲದಂತೆ ಅಕುಶಲ ಕೆಲಸವನ್ನು ಒದಗಿಸುವುದು. ವಾರದ ಕೂಲಿಯನ್ನು ೧೫ ದಿನಗಳೊಳಗಾಗಿ ಪಾವತಿಸತಕ್ಕದ್ದು. ಮಹಿಳೆಯರಿಗೆ ಮತ್ತು ಪುರುಷರಿಗೆ ಸಮಾನ ಕೂಲಿ ಪಾವತಿಸುವುದು. ಜನರು ಮಾಡಬಹುದಾದ ಕೆಲಸಗಳಿಗೆ ಯಂತ್ರಗಳನ್ನು ಬಳಸತಕ್ಕದ್ದಲ್ಲ. ಗುತ್ತಿಗೆದಾರರನ್ನು ಕೈಗೊಳ್ಳಬೇಕಾದ ಕಾಮಗಾರಿಗಳನ್ನು ಗ್ರಮಾ ಸಭೆಯಲ್ಲಿಯೇ ಗುರುತಿಸುವುದು ಕಡ್ಡಾಯವಾಗಿದೆ.

**೫. ಕಾಯ್ದೆಯ ವಿರುದ್ಧ ಧೋರಣೆಗೆ ದಂಡ**

ಈ ಕಾಯ್ದೆಯಡಿಯಲ್ಲಿ ಯೋಜನೆಯ ಅನುಷ್ಠಾನದ ವಿರುದ್ಧ ಧೋರಣೆ ತಳೆದರೆ ರೂ. ೧,೦೦೦/- ವರೆಗೆ ದಂಡ ವಿಧಿಸಲಾಗುತ್ತದೆ.

**೬. ರಕ್ಷಣೆ**

ಯೋಜನೆಯನ್ನು ಒಳ್ಳೆಯ ದೃಷ್ಟಿಯಿಂದ ಕಾರ್ಯಗತಗೊಳಿಸುವಾಗ, ಯಾವುದೇ ಸಂದರ್ಭದಲ್ಲೂ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಥವಾ ಕಾರ್ಯಕ್ರಮ ಅಧಿಕಾರಿ ಅಥವಾ ಯಾವುದೇ ಸಾರ್ವಜನಿಕ ಸೇವಕನ ವಿರುದ್ಧ (ಯೋಜನೆಗೆ ಸಂಬಂಧಿಸಿದ) ಯಾವುದೇ ಕ್ರಿಮಿನಲ್ ಮೊಕದ್ದಮೆಯನ್ನಾಗಲಿ ಅಥವಾ ಇತರೆ ಖಟ್ಲೆಗಳನ್ನಾಗಲಿ ನ್ಯಾಯಾಲಯದಲ್ಲಿ ಹೂಡಲು ಅವಕಾಶವಿರುವುದಿಲ್ಲ.

**೪.೪ ಕಾಮಗಾರಿಗಳ ಆಯ್ಕೆ**

ಕಾಯಿದೆಯಲ್ಲಿ ಸೂಚಿಸಲಾಗಿರುವ ೮ ಆದ್ಯತಾ ಕಾಮಗಾರಿಗಳು ಮತ್ತು ಈ ಕಾಮಗಾರಿಗಳನ್ನು ಯಾವ ಯಾವ ರೀತಿಯಲ್ಲಿ ಅನುಷ್ಠಾನಗೊಳಿಸಬೇಕೆಂಬುದನ್ನು ನಿರ್ಧರಿಸುವುದು.

**೧. ಜಲಸಂರಕ್ಷಣೆ ಮತ್ತು ಮಳೆ ನೀರು ಕೊಯ್ಲು**

ಅಂತರ್ಜಲ ಮಟ್ಟ ದಿನೇ ದಿನೇ ಕುಸಿಯುತ್ತಾ ಕುಡಿಯುವ ನೀರು ಮತ್ತು ಕೃಷಿ ಚಟುವಟಿಕೆಗಳಿಗೆ ನೀರಿನ ಕೊರತೆ ಭಯಾನಕವಾಗಿ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ, ಜಲಸಂರಕ್ಷಣೆ ಮತ್ತು ಮೇಳೆ ನೀರು ಕೊಯ್ಲು ಕಾಮಗಾರಿಗಳಿಗೆ ಮೊದಲ ಆದ್ಯತೆ ನೀಡಲಾಗಿದೆ. ಕೆರೆ, ತಡೆ ಅಣೆಕಟ್ಟು, ಜಿನುಗುಕೆರೆ, ಕುಂಟೆ, ಗೋಕಟ್ಟೆ, ತಿರುವು ಕಾಲುವೆ, ಕಾಂಟೂರ್ ಬಂಡಿಂಗ್, ಶಾಲೋವಲ್ ನಿರ್ಮಾಣ, ಶಾಲೆಗಳಲ್ಲಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳ ಮನೆಗಳಲ್ಲಿ ಮಳೆ ನೀರು ಕೊಯ್ಲು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವುದು.



**೨. ಬರಗಾಲ ತಡೆಗಟ್ಟುವಿಕೆ**

ಕೆರೆಗಳ ಆಸುಪಾಸು, ಕಾಲುವೆಗಳ ಏರಿಗಳು, ಸರ್ಕಾರಿ ಖಾಲಿ ಸ್ಥಳಗಳು, ಗೋಮಾಳ, ರಸ್ತೆಗಳ ಅಕ್ಕ ಪಕ್ಕ ಇತ್ಯಾದಿ ಸ್ಥಳಗಳಲ್ಲಿ ಗಿಡಗಳನ್ನು ಬೆಳೆಸುವುದು. ಪಂಚಾಯಿತಿ ವ್ಯಾಪ್ತಿಯಲ್ಲಿ ಖಾಲಿ ಸರ್ಕಾರಿ ಜಮೀನನ್ನು ಗುರುತಿಸಿ ಸಾಮಾಜಿಕ ಅರಣ್ಯ ಬೆಳೆಸುವುದು. ಸಾಮಾಜಿಕ ಅರಣ್ಯ ಬೆಳೆಸಲು ಮತ್ತು ಜನರಲ್ಲಿ ಗಿಡ ನೆಡುವ ಮನೋಭಾವವನ್ನು ಮೂಡಿಸುವ ನಿಟ್ಟಿನಲ್ಲಿ ಹಾಗೂ ಉದ್ಯೋಗ ಒದಗಿಸಲು ನರ್ಸರಿಗಳನ್ನು ಆರಂಭಿಸುವುದು.

(ಅರಣ್ಯೀಕರಣಕ್ಕೆ ಹೆಚ್ಚಿನ ಮೊತ್ತವನ್ನು ವಿನಿಯೋಗಿಸುವ ದೃಷ್ಟಿಯಿಂದ, ಪಂಚಾಯಿತಿಯಲ್ಲಿ ಒಂದು ಆರ್ಥಿಕ ವರ್ಷದಲ್ಲಿ ತೆಗೆದುಕೊಳ್ಳುವ ಎಲ್ಲಾ ಕಾಮಗಾರಿಗಳಿಗೆ ವಿನಿಯೋಗಿಸುವ ಮೊತ್ತದಲ್ಲಿ ಕನಿಷ್ಠ ಶೇಕಡ ೨೦ಕ್ಕೆ ಕಡಿಮೆ ಇಲ್ಲದಂತೆ ಅರಣ್ಯೀಕರಣಕ್ಕೆ ವಿನಿಯೋಗಿಸಬೇಕು).

**೩. ನೀರಾವರಿ**

ಹೊಸ ನೀರಾವರಿ ಕಾಲುವೆಗಳು, ಪೂರಕ ನಾಲೆಗಳು, ಕ್ಷೇತ್ರ ಕಾಲುವೆಗಳ ನಿರ್ಮಾಣ ಮತ್ತು ದುರಸ್ಥಿ ಕಾಮಗಾರಿಗಳನ್ನು ತೆಗೆದುಕೊಳ್ಳಬಹುದು.

**೪. ನೀರಾವರಿ ಸೌಲಭ್ಯ**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಕುಟುಂಬಗಳ ಒಡೆತನದ, ಭೂಸುಧಾರಣಾ ಫಲಾನುಭವಿಗಳ, ಭಾರತ ಸರ್ಕಾರದ ಇಂದಿರಾ ಆವಾಸ್ ಯೋಜನೆ ಫಲಾನುವಿಗಳ ಹಾಗೂ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ (ಬಿ.ಪಿ.ಎಲ್) ಜಮೀನಿನಲ್ಲಿ ನೀರಾವರಿ ಸೌಲಭ್ಯ ಒದಗಿಸುವುದು.

**೫. ನೀರಿನ ಮೂಲಗಳ ಪುನಶ್ಚೇತನ**

ಹಳೆ ಕೆರೆಗಳ ಪುನಶ್ಚೇತನ, ಕುಡಿಯುವ ನೀರಿನ ಬಾವಿಗಳ ಪುನಶ್ಚೇತನ, ಕಲ್ಯಾಣಿ, ಹೊಂಡಗಳು, ಗೋಕಟ್ಟೆಯಂತಹ ಸಾಂಪ್ರದಾಯಿಕ ನೀರು ಸಂಚಯಗಳ ಪುನಶ್ಚೇತನ ಮತ್ತು ಕೆರೆಗಳ ಹೂಳು ತೆಗೆಯುವುದು.

**೬. ಜಮೀನಿನ ಅಭಿವೃದ್ಧಿ**

ಆರ್ಥಿಕವಾಗಿ ಹಿಂದುಳಿದ ವರ್ಗದ ಜನರಿಗಾಗಿ ಕೇಂದ್ರ/ರಾಜ್ಯ ಗ್ರಾಮೀಣ ವಸತಿ ನಿರ್ಮಾಣ ಯೋಜನೆಗಳ ಫಲಾನುಭವಿಗಳ ಬಡಾವಣೆ ಅಭಿವೃದಿ, ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲಾ/ಕಾಲೇಜುಗಳ ಆಟದ ಮೈದಾನ ಅಭಿವೃದಿ, ಸರ್ಕಾರಿ ತೋಟಗಾರಿಕಾ ಫಾರ್ಮ್‌ಗಳು, ಕೃಷಿ ಫಾರಂಗಳು, ಮೀಣು ಸಾಕಾಣಿಕಾ ಕೇಂದ್ರಗಳು, ಮೇವು ಬೆಳೆಯುವ ಕೇಂದ್ರಗಳು, ರೇಷ್ಮೆ ಬೆಳೆ ಕೇಂದ್ರಗಳಿಗಾಗಿ ಭೂಮಿಯ ಅಭಿವೃದಿ, ರೈತ ಸಂತೆಗಳು ಇತ್ಯಾದಿಗಳಿಗಾಗಿ ಭೂಮಿಯನ್ನು ಅಭಿವೃದಿ ಪಡಿಸುವುದು.

**೭. ನೆರೆ (ಪ್ರವಾಹ) ನಿಯಂತ್ರಣ ಮತ್ತು ತಡೆ**

ತಗ್ಗು ಪ್ರದೇಶಗಳಿಗ ನೆರೆ (ಪ್ರವಾಹದ) ನೀರು ನುಗ್ಗದಂತೆ ತಡೆಗೋಡೆಗಳನ್ನು ನಿರ್ಮಿಸುವುದು. ನೆರೆ (ಪ್ರವಾಹ)ಯಿಂದಾಗಿ ಮಣ್ಣಿನ ಕೊರೆತ ನಿಲ್ಲಿಸಲು ತಡೆಗೋಡೆಗಳ ನಿರ್ಮಾಣ, ಚೌಗು ಪ್ರದೇಶಗಳಲ್ಲಿ ನೀರನ್ನು ಹೊರಹಾಕಲು ಬಸಿ ಕಾಲುವೆಗಳ ಬಸಿ ಕಾಲುವೆಗಳ ನಿರ್ಮಾಣ.

**೮. ಸರ್ವಋತು ಗ್ರಾಮೀಣ ರಸ್ತೆ ನಿರ್ಮಾಣ**

ಈ ಯೋಜನೆಯಡಿಯಲ್ಲಿ ರಸ್ತೆ ಕಾಮಗಾರಿಗೆ ಕೊನೆಯ ಆದ್ಯತೆ ನೀಡಲಾಗಿದೆ. ಕೈಗೊಳ್ಳುವ ರಸ್ತೆ ಕಾಮಗಾರಿಗಳು ಎಲ್ಲಾ ರೀತಿಯ ಋತುಮಾನಗಳಲ್ಲೂ ಉಪಯೋಗಿಸುವಂತಿರಬೇಕು. ಕೃಷಿ ಚಟುವಟಿಕೆಗಳಾಗಿ ರೈತರು ತಮ್ಮ ಜಮೀನುಗಳಿಗೆ ಹೋಗುವ ರಸ್ತೆಯನ್ನು ಹಾಗೂ ಕೃಷಿಕರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆ/ಸಂತೆಗಳಿಗೆ ಸಾಗಿಸುವ ರಸ್ತೆಗಳನ್ನು ಅಭಿವೃದಿ ಪಡಿಸಬಹುದಾಗಿದೆ. (ಪಂಚಾಯಿತಿಯಲ್ಲಿ ಒಂದು ಆರ್ಥಿಕ ವರ್ಷದಲ್ಲಿ ತೆಗೆದುಕೊಳ್ಳುವ ಎಲ್ಲಾ ಕಾಮಗಾರಿಗಳಿಗೆ ವಿನಿಯೋಗಿಸುವ ಮೊತ್ತದಲ್ಲಿ ಶೇ. ೧೦ ಕ್ಕೆ ಮೀರದಂತೆ ತೆಗೆದುಕೊಳ್ಳತಕ್ಕದ್ದು.

**೯. ಕೇಂದ್ರ ಸರ್ಕಾರ ಸೂಚಿಸುವ ಕಾಮಗಾರಿಗಳು**

ವಿಶೇಷ ಸಂದರ್ಭಗಳಲ್ಲಿ ಕೆಲವು ಕಾಮಗಾರಿಗಳು ಅಗತ್ಯವೆನಿಸಿದರೆ ಅಂತಹ ಸಂದರ್ಭಗಳಲ್ಲಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ಕೇಂದ್ರ ಸರ್ಕಾರ ಅಧಿಸೂಚಿಸುವ ಇತರೆ ಯಾವುದೇ ಕಾಮಗಾರಿಗಳನ್ನು ತೆಗೆದುಕೊಳ್ಳಬಹುದಾಗಿದೆ.

**೧೦. ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ**

ಗ್ರಾಮ ಪಂಚಾಯಿತಿಯ ತಾಲ್ಲೂಕು ಪಂಚಾಯಿತಿ ಮುಖಾಂತರ ಸಲ್ಲಿಸುವ ಕಾಮಗಾರಿಗಳ ಯಾದಿಗೆ ಜಿಲ್ಲಾ ಪಂಚಾಯಿತಿಯ ಸಾಮಾನ್ಯ ಸಭೆಯ ಅನುಮೋದನೆ ಪಡೆದ ನಂತರ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯು ಕ್ರೋಢಿಕೃತ ಕಾಮಗಾರಿಗಳ ಯಾದಿಗೆ ಆಡಳಿತಾತ್ಮಕ

ಮಂಜೂರಾತಿಯನ್ನು ನೀಡಬೇಕು. ನಂತರದಲ್ಲಿ ಪ್ರತಿಯೊಂದು ಕಾಮಗಾರಿಗೂ ಪ್ರತ್ಯೇಕ ಕ್ರಮ ಸಂಖ್ಯೆಯನ್ನು ಆದ್ಯತೆ ಆಧಾರದಲ್ಲಿಯೇ ನೀಡಿ ಮುಂದಿನ ಕ್ರಮಕ್ಕಾಗಿ ಕಾರ್ಯಕ್ರಮ ಅಧಿಕಾರಿಗೆ (ಕಾರ್ಯ ನಿರ್ವಾಹಕ ಅಧಿಕಾರಿ) ಕಳುಹಿಸಿಕೊಡುತ್ತಾರೆ. ತದನಂತರದಲ್ಲಿ ಕಾರ್ಯಕ್ರಮ ಅಧಿಕಾರಿಯು ಆಡಳಿತಾತ್ಮಕ ಅನುಮೋದನೆ ಪಡೆದ ಕಾಮಗಾರಿಗಳ ಯಾದಿಯನ್ನು ಆಯಾಯ ಗ್ರಾಮ ಪಂಚಾಯಿತಿಗಳಿಗೆ ಕಳುಹಿಸಿಕೊಡಬೇಕು.

ಆ ಕಾರ್ಯಕ್ರಮ ಅಧಿಕಾರಿಯಿಂದ ಸ್ವೀಕರಿಸಿದ ಆಡಳಿತಾತ್ಮಕ ಮಂಜೂರಾತಿ ಪಡೆದ ಕಾಮಗಾರಿಗಳ ಯಾದಿಯನ್ನು ಸಂಬಂಧಪಟ್ಟ ಇಲಾಖೆಗಳಿಗೆ ಕಳುಹಿಸಿ, ವಿವರವಾದ ಅಂದಾಜುಪಟ್ಟಿ ತಯಾರಿಸಿ ತಾಂತ್ರಿಕ ಮಂಜೂರಾತಿ ಪಡೆದು ಪ್ರತಿಯೊಂದನ್ನು ಗ್ರಾಮ ಪಂಚಾಯಿತಿಗೆ ಸಲ್ಲಿಸಲು ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು ಸಂಬಂಧಪಟ್ಟ ಕಾರ್ಯನಿರ್ವಾಹಣಾ ಇಲಾಖೆಗಳಿಗೆ ತಿಳಿಸಬೇಕು. ಆಯಾಯ ಇಲಾಖೆಗಳಿಂದ ತಾಂತ್ರಿಕ ಮಂಜೂರಾತಿ ಪಡೆದು ಬಂದ ಅಂದಾಜು ಪಟ್ಟಿಗಳನ್ನು ಕಾಮಗಾರಿಗಳ ಯಾದಿಯನ್ನಾಗಿ (Self of project) ಅನುಷ್ಠಾನಕ್ಕೆ ಗ್ರಾಮ ಪಂಚಾಯಿತಿಯು ಉಪಯೋಗಿಸಬೇಕು.

**೧೧. ಕಾಮಗಾರಿ ಪ್ರಾರಂಭ ಪತ್ರ**

ಉದ್ಯೋಗ ಬೇಡಿಕೆಗೆ ಅನುಸಾರವಾಗಿ ಕಾಮಗಾರಿಗಳನ್ನು ಆರಂಭಿಸಲು ಕಾಮಗಾರಿ ಪ್ರಾರಂಭ ಪತ್ರ ನೀಡುವಂತೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಕಾರ್ಯಕ್ರಮ ಅಧಿಕಾರಿಗೆ ಕೋರಿಕೆ ಸಲ್ಲಿಸಬೇಕು. ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯು ಆಡಳಿತಾತ್ಮಕ ಅನುಮೋದನೆ ನೀಡಿದ ಪಟ್ಟಿಯಲ್ಲಿರುವ ಅನುಕ್ರಮದಂತೆ ಕಾಮಗಾರಿಗಳನ್ನು ಆರಂಭಿಸಲು ಪಟ್ಟಿಯಲ್ಲಿರುವ ಅನುಕ್ರಮದಂತೆ ಕಾಮಗಾರಿಗಳನ್ನು ಆರಂಭಿಸಲು ಕಾರ್ಯಕ್ರಮ ಅಧಿಕಾರಿ ಗ್ರಾಮ ಪಂಚಾಯಿತಿಗಳಿಗೆ ಆಕಾಮಗಾರಿ ಪ್ರಾರಂಭ ಪತ್ರಟಿ ನೀಡಬೇಕು. ಕಾಮಗಾರಿ ಪ್ರಾರಂಭ ಪತ್ರ ಪಡೆದ ಕೂಡಲೆ ಕಾರ್ಯನಿರ್ವಹಣಾ ಏಜೆನ್ಸಿಗಳು ಕಾಮಗಾರಿಗಳನ್ನು ಪ್ರಾರಂಭಿಸಬೇಕು.

**೧೨. ಕೂಲಿ ಪಾವತಿ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ದಿನಗೂಲಿ ರೂ. ೭೪/- (ಎಪ್ಪತ್ನಾಲ್ಕು ರೂಪಾಯಿಗಳು ಮಾತ್ರ) ಗಳಾಗಿದೆ. ಕಾಮಗಾರಿ ಸ್ಥಳ ಕೂಲಿ ಕಾರ್ಮಿಕನ ವಾಸಸ್ಥಳದಿಂದ ೫ ಕಿ.ಮೀ.ಗಿಂತ ದೂರವಿದ್ದಲ್ಲಿ, ಹೆಚ್ಚುವರಿ ಶೇ. ೧೦ ರಂತೆ ದಿನಗೂಲಿ ಪಾವತಿಸಬೇಕು. ಅಂದರೆ ರೂ. ೭-೪೦ ನ್ನು ಸೇರಿಸಿ ಒಟ್ಟು ರೂ.೮೧-೪೦ ಗಳನ್ನು ಪಾವತಿಸಬೇಕು. ಪ್ರತಿ ವಾರಾಂತ್ಯ ಕೂಲಿ ಪಾವತಿ, ಅನಿವಾರ್ಯವಾದಲ್ಲಿ ೧೫ ದಿನಗಳಿಗೆ ಮೀರದಂತೆ ಕೂಲಿ ಪಾವತಿ ಮಾಡಬೇಕು. ಕುಟುಂಬದ ಯಾರೇ ಸದಸ್ಯರು ಗಳಿಸಿದ ಮಜೂರಿ ಹಣ ಕುಟುಂಬದ ಜಂಟಿ ಉಳಿತಾಯ ಖಾತೆ ಜಮೆ ಮಾಡಬೇಕು. ಕಾರ್ಯನಿರ್ವಹಣಾ ಏಜೆನ್ಸಿ ಯಾರೇ ಆದರೂ ಸಹ, ಅಕುಶಲ ಕಾರ್ಮಿಕರ ಕೂಲಿಯನ್ನು ಗ್ರಾಮ ಪಂಚಾಯಿತಿ ಮೂಲಕವೇ ಪಾವತಿಸಬೇಕು.

ನಿರುದ್ಯೋಗ ಭತ್ಯೆ ಅಕುಶಲ ಕಾರ್ಮಿಕ ಉದ್ಯೋಗ ಕೋರಿ ಅರ್ಜಿ ಸಲ್ಲಿಸಿದ ೧೫ ದಿನಗಳೊಳಗಾಗಿ ಅಥವಾ ಮುಂಗಡ ಅರ್ಜಿಯಲ್ಲಿ ಸೂಚಿಸಿದ ದಿನಾಂಕ ಇವುಗಳಲ್ಲಿ ಯಾವುದು ನಂತರವೋ, ಅದರ ಒಳಗಾಗಿ ಉದ್ಯೋಗ ನೀಡದಿದ್ದಲ್ಲಿ, ನಿರುದ್ಯೋಗ ದಾಯಿಡ್ಲು ಪಾವತಿಗಾಗಿ ಅರ್ಜಿದಾರರು ಗ್ರಮ ಪಂಚಾಯಿತಿ ಕಾರ್ಯದರ್ಶಿಗೆ ಅರ್ಜಿ ಸಲ್ಲಿಸಬಹುದು. ಕಾರ್ಯದರ್ಶಿಯು ಈ ಅರ್ಜಿಗಳನ್ನು ಪರಿಶೀಲಿಸಿ ಅಗತ್ಯ ವಿವರಗಳೊಂದಿಗೆ ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯು ನಿರುದ್ಯೋಗ ಭತ್ಯೆ ಅರ್ಜಿಗಳನ್ನು ಪರಿಶೀಲಿಸಿ, ಅರ್ಹರಲ್ಲದವರ ಅರ್ಜಿ ತಿರಸ್ಕರಿಸಿ ಹಿಂಬರಹ ನೀಡಬೇಕು. ಅರ್ಹರಿದ್ದಲ್ಲಿ ನಿರುದ್ಯೋಗ ಭತ್ಯೆ ಅರ್ಜಿಗಳನ್ನು ಪರಿಶೀಲಿಸಿ, ಅರ್ಹರಿದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಬೇಕು. ಅರ್ಜಿದಾರರು ಆರ್ಥಿಕ ವರ್ಷದ ಮೊದಲ ೩೦ ದಿನಗಳಿಗೆ ಕೂಲಿಯ ಶೇ. ೨೫ ರಷ್ಟು ಮತ್ತು ಉಳಿದ ಅವಧಿಗೆ ಕೂಲಿಯ ಶೇ. ೫೦ ರಷ್ಟನ್ನು ನಿರುದ್ಯೋಗ ಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

ಅರ್ಜಿದಾರರಿಗೆ ಅಥವಾ ಅವರ ಕುಟುಂಬದ ಇತರೆ ವಯಸ್ಕ ಸದಸ್ಯ ಕೆಲಸಕ್ಕೆ ವರದಿ ಮಾಡಿಕೊಳ್ಳುವಂತೆ ಅರ್ಜಿದಾರರಿಗೆ ಸೂಚಿಸಿದ್ದರೂ, ಅವರು ವರದಿ ಮಾಡಿಕೊಳ್ಳದೇ ಇದ್ದರೆ, ಅರ್ಜಿದಾರರು ಕೋರಿದ ಅವಧಿಯು ಮುಕ್ತಾಯಗೊಂಡಿದ್ದು ಆ ಕುಟುಂಬದ ಯಾವೋಬ್ಬ ಸದಸ್ಯರು ಕೆಲಸಕ್ಕೆ ಹಾರಾಗದೇ ಇದ್ದರೆ ನಿರುದ್ಯೋಗ ಭತ್ಯೆ ಪಡೆಯಲು ಅರ್ಹರಾಗಿರುವುದಿಲ್ಲ. ನೋಂದಾಯಿತ ಕುಟುಂಬ ನಿರುದ್ಯೋಗ ಭತ್ಯೆಯನ್ನು ಒಳಗೊಂಡಂತೆ, ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳಿಗೆ ಲಭ್ಯವಾಗುವಷ್ಟು ಕೂಲಿಯನ್ನು ಪಡೆದಿದ್ದರೆ, ನಿರುದ್ಯೋಗ ಭತ್ಯೆ ಪಡೆಯಲು ಅರ್ಹರಾಗಿರುವುದಿಲ್ಲ.

ಹೊಸ ಕಾಮಗಾರಿಯನ್ನು ಪ್ರಾರಂಭಿಸಲು ಕನಿಷ್ಠ ೧೦ ಕೆಲಸಗಾರರು ಸಿಗದಿದ್ದಲ್ಲಿ ಅಥವಾ ಅರ್ಜಿದಾರರನ್ನು ಮುಂದುವರೆದ ಕಾಮಗಾರಿಯಲ್ಲಿ ವಿಲೀನಗೊಳಿಸಲು ಸಾಧ್ಯವಾಗದಿದ್ದಲ್ಲಿ ಅಥವ ಪಕ್ಕದ ಗ್ರಾಮ ಪಂಚಾಯಿತಿಯಲ್ಲಿ ಕೆಲಸ ನೀಡಲು ಸಾಧ್ಯವಾಗದಿದ್ದಲ್ಲಿ, ಅಥವಾ ಕೆಲಸವನ್ನು ಹಂಚಿಕೆ ಮಾಡಿ ತಿಳಿಸಿದ್ದರೂ ಸಹ ಕೆಲಸಕ್ಕೆ ಹಾಜರಾಗದಿದ್ದಲ್ಲಿ, ನಿರುದ್ಯೋಗ ಭತ್ಯೆ ಸಂದಾಯ ಮಾಡುವಂತಿಲ್ಲ. (ಪಂಚಾಯತ್ ಪ್ರದೇಶದಲ್ಲಿ ಅನುಷ್ಠಾನಗೊಳಿಸಬಹುದುದಾದಂತಹ ವನನಿರ್ಮಾಣ ಕಾಮಗಾರಿ ಇದ್ದಲ್ಲಿ ಹಾಗೂ ಪಂಚಾಯಿತಿ ಪ್ರದೇಶವು ಗುಡ್ಡಗಾಡು ವ್ಯಾಪ್ತಿಗೆ ಒಳಪಟ್ಟಿದ್ದರೆ ಕನಿಷ್ಠ ೧೦ ಜನ ಕೂಲಿಕಾರ್ಮಿಕರು ಇರುವುದು ಕಡ್ಡಾಯವಲ್ಲ)

**೪.೫ ಅನುಷ್ಠಾನ ವ್ಯವಸ್ಥೆ**

ಗ್ರಾಮ ಪಂಚಾಯಿತಿಯು ಯೋಜನೆಯ ಅನುಷ್ಠಾನದ ಪ್ರಾಧಿಕಾರವಾಗಿರುತ್ತದೆ. ವಾರ್ಡ್ ಸಭೆ ಮತ್ತು ಗ್ರಾಮ ಸಭೆ ಮೂಲಕ ಶಿಫಾರಸ್ಸಾಗಿ ಬರುವ ಕಾಮಗಾರಿಗಳ ಪೈಕಿ ಆದ್ಯತೆಯನ್ನು ಗುರುತಿಸಿ ಅವುಗಳನ್ನು ಅನುಷ್ಠಾನಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಜವಾಬ್ದಾರಿ ಗ್ರಾಮಪಂಚಾಯಿತಿಯದ್ದಾಗಿರುತ್ತದೆ. ನೋಂದಣಿಗಾಗಿ ಸಲ್ಲಿಸುವ ಅರ್ಜಿಗಳನ್ನು ಪರೀಶಿಲಿಸಿ ಉದ್ಯೋಗ ಚೀಟಿಗಳನ್ನು ವಿತರಿಸುವ ಹಾಗೂ ಉದ್ಯೋಗ ಚೀಟಿಯನ್ನು ನವೀಕರಿಸುವ ಜವಾಬ್ದಾರಿ

ಗ್ರಾಮ ಪಂಚಾಯಿತಿಯದ್ದಾಗಿರುತ್ತದೆ. ಗ್ರಾಮ ಪಂಚಾಯಿತಿ ಕಾರ್ಯದರ್ಶಿಗೆ ಹಾಗೂ ಕಾರ್ಯ ನಿರ್ವಹಣಾ ಏಜೆನ್ಸಿಯ ತಾಂತ್ರಿಕ ಸಿಬ್ಬಂದಿಗೆ ನೆರವಾಗಲು ಒಬ್ಬ ಗ್ರಾಮ ಅಭಿವೃದ್ಧಿ ಸಹಾಯಕ ಇರುತ್ತಾನೆ.

**೧. ತಾಲ್ಲೂಕು ಮಟ್ಟದಲ್ಲಿ**

ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿ ಈ ಯೋಜನೆಯ ಕಾರ್ಯಕ್ರಮ ಅಧಿಕಾರಿಯಾಗಿರುತ್ತಾರೆ. ಕಾರ್ಯಕ್ರಮ ಅಧಿಕಾರಿಯು ತಾಲ್ಲೂಕು ಹಂತದಲ್ಲಿ ವಿವಿಧ ಪ್ರಕ್ರಿಯೆಗಳ ಬಗ್ಗೆ ಸಮನ್ವಯ ಮಾಡುವ ಅತಿ ಮುಖ್ಯ ಜವಾಬ್ದಾರಿ ಹೊಂದಿರುತ್ತಾರೆ. ತಾಲ್ಲೂಕು ಪಂಚಾಯಿತಿ ಈ ಯೋಜನೆಯಡಿ ತನ್ನ ಕರ್ತವ್ಯ ನಿರ್ವಹಿಸಲು ಕಾರ್ಯಕ್ರಮ ಅಧಿಕಾರಿ ಸಹಾಯ ಮಾಡುತ್ತಾರೆ. ಕಾರ್ಯನಿರ್ವಾಹಣಾ ಏಜೆನ್ಸಿಗಳು ಸಮಯಕ್ಕೆ ಸರಿಯಾಗಿ ಕೆಲಸ ಪ್ರಾರಂಭಿಸುವ, ನಿಗದಿತ ಸಮಯದೊಳಗೆ ಕೆಲಸ ನೀಡುವ ಹಾಗೂ ಅಕುಶಲ ಕಾರ್ಮಿಕರಿಗೆ ಲಭ್ಯವಿರುವ ಹಕ್ಕುಗಳು ಸಿಗುವಂತೆ ಮಾಡುವ ಜವಾಬ್ದಾರಿ, ಗ್ರಾಮ ಸಭೆಗಳ ಮೂಲಕ ಸಾಮಾಜಿಕ ಲೆಕ್ಕ ಪರಿಶೋಧನೆ ಮಾಡುವುದು ಹಾಗೂ ಸಾರ್ವಜನಿಕ ಕುಂದು ಕೊರತೆಗಳ ವಿಚಾರಣೆ ಮಾಡುವ ಜವಾಬ್ದಾರಿ ಕಾರ್ಯಕ್ರಮ ಅಧಿಕಾರಿಯದ್ದಾಗಿರುತ್ತದೆ. ಕಾರ್ಯಕ್ರಮ ಅಧಿಕಾರಿಯು ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯ ನಿರ್ದೇಶನ, ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರುತ್ತಾರೆ. ಕಾರ್ಯಕ್ರಮ ಅಧಿಕಾರಿಗೆ ಸಹಾಯ ಮಾಡಲು ಪ್ರತಿ ತಾಲ್ಲೂಕು ಪಂಚಾಯಿತಿಯಲ್ಲಿ ಒಬ್ಬ ಸಹಾಯಕ ಕಾರ್ಯಕ್ರಮ ಅಧಿಕಾರಿಯನ್ನು ನಿಯೋಜನೆ ಅಥವ ಗುತ್ತಿಗೆ ಆಧಾರದ ಮೇಲೆ ಪೂರ್ಣಕಾಲಿಕವಾಗಿ ನೇಮಿಸಿಕೊಳ್ಳಲು ಅವಕಾಶವಿರುತ್ತದೆ. ತಾಲ್ಲೂಕು ಪಂಚಾಯಿತಿಯು ಗ್ರಾಮ ಪಂಚಾಯಿತಿಗಳಿಂದ ಬಂದ ಯೋಜನೆಗಳನ್ನು ಕ್ರೋಢೀಕರಿಸಿ, ಪರಿಶೀಲಿಸಿ, ಅನುಮೋದಿಸಿ ಅಂತಿಮ ಮಂಜೂರಾತಿಗಾಗಿ ಜಿಲ್ಲಾ ಪಂಚಾಯಿತಿಗೆ ಕಳುಹಿಸಿಕೊಡುವುದು.

**೨. ಜಿಲ್ಲಾ ಮಟ್ಟದಲ್ಲಿ**

ಜಿಲ್ಲಾ ಪಂಚಾಯಿತಿಯು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಈ ಯೋಜನೆಯ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯಾಗಿರುತ್ತಾರೆ. ತಾಲ್ಲೂಕು ಪಂಚಾಯಿತಿ ಮೂಲಕ ಗ್ರಾಮ ಪಂಚಾಯಿತಿಗಳು ಈ ಯೋಜನೆಯಡಿ ಸಿದ್ಧಪಡಿಸಿ ಸಲ್ಲಿಸುವ ಯೋಜನೆಗಳ ಪ್ರಸ್ತಾವನೆಗಳನ್ನು ಅನುಮೋದಿಸುವುದು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಯೋಜಜನೆಯ ಅನುಷ್ಠಾನದ ಪರಿಶೀಲನೆ ಮತ್ತು ಮೇಲ್ವಿಚಾರಣೆಯನ್ನು ಜಿಲ್ಲಾ ಪಂಚಾಯಿತಿ ಮಾಡಬೇಕು. ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಗಳು ತಾಲ್ಲೂಕು ಪಂಚಾಯಿತಿಯಿಂದ ಬಂದ ಕ್ರೋಢಿಕೃತ ಯೋಜನೆಗಳನ್ನು ಪರಿಶೀಲಿಸಿ ಜಿಲ್ಲಾ ಪಂಚಾಯಿತಿಯ ಅನುಮೋದನೆಗೆ ಮಂಡಿಸುವುದು ವಿವಿಧ ಸಂಸ್ಥೆಗಳ ಜವಾಬ್ದಾರಿ.

**೩. ಗ್ರಾಮ ಪಂಚಾಯಿತಿ**

ಪ್ರತಿ ಗ್ರಾಮ ಪಂಚಾಯಿತಿಯು ತಮಗೆ ನಿಗಧಿಪಡಿಸಿದ ಮೊತ್ತಕ್ಕೆ ಆದ್ಯತೆ ಮೇರೆಗೆ ತಮ್ಮ ವ್ಯಾಪ್ತಿಯ ಕಾಮಗಾರಿಗಳನ್ನು ವಾರ್ಡ್‌ಸಭೆ ಮತ್ತು ಗ್ರಾಮ ಸಭೆಗಳ ಶಿಫಾರಸ್ಸಿನ ಮೇರೆಗೆ

ತಯಾರಿಸಬೇಕು. ಗ್ರಾಮ ಪಂಚಾಯಿತಿಯು ಅನುಮೋದಿಸಿ ಸಿದಪಡಿಸಿದ ಕಾಮಗಾರಿಗಳ ಪಟ್ಟಿಯನ್ನು ಅನುಮೋದನೆಗಾಗಿ ಗ್ರಾಮ ಪಂಚಾಯಿತಿಯು ಕಾರ್ಯಕ್ರಮ ಅಧಿಕಾರಿಗಳಿಗೆ ಸಲ್ಲಿಸಬೇಕು.

**೪. ತಾಲ್ಲೂಕು ಪಂಚಾಯಿತಿ**

ಪ್ರತಿ ಗ್ರಾಮ ಪಂಚಾಯಿತಿಯ ಪಟ್ಟಿಯಲ್ಲಿನ ಕಾಮಗಾರಿಗಳಿಂದ ನಿರೀಕ್ಷಿಸಲಾದ ಅಕುಶಲ ಕೂಲಿಯನ್ನು ಒದಗಿಸಲು ಸಾಕಾಗುವುದಿಲ್ಲವೆಂದು ಕಂಡುಬಂದಲ್ಲಿ ಹೆಚ್ಚುವರಿ ಪ್ರಸ್ತಾವನೆಗಳನ್ನು ಕಳುಹಿಸಿಕೊಡುವಂತೆ ಸೂಚಿಸಿ ಕಾರ್ಯಕ್ರಮಾಧಿಕಾರಿ ಸಂಬಂಧಿಸಿದ ಗ್ರಾಮ ಪಂಚಾಯಿತಿಗೆ ವಾಪಸ್ಸು ಕಳುಹಿಸಬೇಕು. ಕಾರ್ಯಕ್ರಮ ಅಧಿಕಾರಿಯು, ಗ್ರಾಮ ಪಂಚಾಯಿತಿಯ ಯೋಜನೆಗಳ ಕ್ರೋಢೀಕೃತ ಪಟ್ಟಿಯನ್ನು ಅನುಮೋದನೆಗಾಗಿ ತಾಲ್ಲೂಕು ಪಂಚಾಯಿತಿ ಸಭೆಗೆ ಮಂಡಿಸಬೇಕು. ಗ್ರಾಮ ಪಂಚಾಯಿತಿಯು ಸೂಚಿಸಿದ ಆದ್ಯತೆಗಳನ್ನು ತಾಲ್ಲೂಕು ಪಂಚಾಯಿತಿಯು ಮುಂದುವರೆಸತಕ್ಕದ್ದು. ಎಲ್ಲಾ ರೀತಿಯಲ್ಲೂ ಸರಿಯಿದ್ದ ಗ್ರಾಮ ಪಂಚಾಯಿತಿಯ ಪ್ರಸ್ತಾವನೆಗಳನ್ನು ತಾಲ್ಲೂಕು ಪಂಚಾಯಿತಿಯು ತಿರಸ್ಕರಿಸುವಂತಿಲ್ಲ. ನಿಗದಿತ ಮಾನದಂಡಗಳಿಗೆ ಅನುಸಾರವಾಗಿಲ್ಲದಿದ್ದರೆ ಅಂತಹ ಪ್ರಸ್ತಾವನೆಗಳನ್ನು ಗ್ರಾಮ ಪಂಚಾಯಿತಿಗೆ ಹಿಂದಿರುಗಿಸಿ, ಸೂಕ್ತವಾದ ಪ್ರಸ್ತಾವನೆಗಳನ್ನು ಸಲ್ಲಿಸುವಂತೆ ತಿಳಿಸಬೇಕು. ಸರಿ ಇರುವ ಹಾಗೂ ಅನುಮೋದನೆಯಾದ ಪ್ರಸ್ತಾವನೆಗಳನ್ನು ಕಾರ್ಯಕ್ರಮ ಅಧಿಕಾರಿ, ಅನುಮೋದನೆಗಾಗಿ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಗಳಿಗೆ ಸಲ್ಲಿಸಬೇಕು.

**೫. ಜಿಲ್ಲಾ ಪಂಚಾಯಿತಿ**

ಪ್ರತಿ ಜಿಲ್ಲಾ ಪಂಚಾಯಿತಿಯು ಮುಂದಿನ ವರ್ಷದಲ್ಲಿ ವರ್ಷದ ಉದ್ಯೋಗ ಬೇಡಿಕೆಗೆ ತಕ್ಕಂತೆ ಬೇಕಾಗುವ ಒಟ್ಟು ಕಾಮಗಾರಿಗಳ ಮೌಲ್ಯವನ್ನು ಲೆಕ್ಕ ಹಾಕಿ ಗ್ರಾಮ ಪಂಚಾಯಿತಿ ಯಾವ ಮೊತ್ತಕ್ಕೆ ಕಾಮಗಾರಿಗಳನ್ನು ಗುರುತಿಸಬೇಕು ಎಂಬುದನ್ನು ಅವುಗಳಿಗೆ ಸೂಚಿಸಬೇಕು. ಗ್ರಾಮ ಪಂಚಾಯಿತಿಗಳು ತಮ್ಮ ಪಾಲಿನ ಒಟ್ಟು ಕಾಮಗಾರಿಗಳ ವೆಚ್ಚದಲ್ಲಿ ಅಕುಶಲ ಕೂಲಿಗಾಗಿ ಸಾಮಗ್ರಿಗಳಿಗಾಗಿ ಕ್ರಮವಾಗಿ ಶೇ. ೬೦ ಕ್ಕಿಂತ ಹೆಚ್ಚು ಹಾಗೂ ೪೦ ಕ್ಕಿಂತ ಕಡಿಮೆ ಇರುವಂತೆ ಪಾಲನೆ ಮಾಡಬೇಕು. ಗ್ರಾಮ ಪಂಚಾಯಿತಿಗಳು ತಾಲ್ಲೂಕು ಪಂಚಾಯಿತಿಗಳ ಮೂಲಕ ಸಲ್ಲಿಸಿದ ಕಾಮಗಾರಿಗಳ ಪಟ್ಟಿಯ ಆದ್ಯತೆಗಳನ್ನು, ಜಿಲ್ಲಾ ಪಂಚಾಯಿತಿ ಬದಲಾಯಿಸತಕ್ಕದ್ದಲ್ಲ. ಜಿಲ್ಲಾ ಪಂಚಾಯಿತಿಯು ಪರಿಗಣಿಸಿ ಅನುಮೋದಿಸಿದ ಜಿಲ್ಲಾ ಯೋಜನೆಯ ಎಲ್ಲಾ ಕಾಮಗಾರಿಗಳಿಗೆ ಪ್ರತ್ಯೇಕವಾದ ಸಂಖ್ಯೆಯನ್ನು ನೀಡಿ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿ ಆಡಳಿತಾತ್ಮಕ ಮಂಜೂರಾತಿ ನೀಡಬೇಕು. ಕಾಮಗಾರಿಗಳ ಪಟ್ಟಿಯನ್ನು ಸಂಬಂಧಿಸಿದ ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಬೇಕು. ಜಿಲ್ಲಾ ಪಂಚಾಯಿತಿಯು, ಅನುಮೋದನೆಯು ಒಳಗೊಂಡಂತೆ ಮುಂದಿನ ವರ್ಷಕ್ಕಾಗಿ ಅಗತ್ಯವಿರುವ ಎಲ್ಲ ಪ್ರಕ್ರಿಯೆಗಳು ಹಿಂದಿನ ವರ್ಷದ ಡಿಸೆಂಬರ್ ಕೊನೆಯ ವೇಳೆಗೆ ಮುಕ್ತಾಯಗೊಂಡುವಂತೆ ನೋಡಿಕೊಳ್ಳಬೇಕು. ಮುಂದಿನ ವರ್ಷಕ್ಕೆ ನಿರೀಕ್ಷಿಸಲಾಗುವ ಅಕುಶಲ

ಉದ್ಯೋಗ ಬೇಡಿಕೆಯ ಆಧಾರದ ಮೇಲೆ 'ಕೂಲಿ ಆಯ-ವ್ಯಯ' (Labour Budget) ವನ್ನು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಸಿದ್ಧಪಡಿಸಬೇಕು. ಇದು ಯೋಜನೆಗಳನ್ನು ರೂಪಿಸಲು ಆಧಾರವಾಗಿರಬೇಕು.

**೬. ರಾಜ್ಯ ಮಟ್ಟ**

ರಾಜ್ಯ ಮಟ್ಟದಲ್ಲಿ ಈ ಯೋಜನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಗ್ರಾಮೀಣಭಿವೃದಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಅವರು ರಾಜ್ಯ ಕಾರ್ಯಕ್ರಮ ಸಮನ್ವಯಾಧಿಕಾರಿ ಆಗಿರುತ್ತಾರೆ. ರಾಜ್ಯ ಉದ್ಯೋಗ ಖಾತರಿ ಪರಿಷತ್ತನ್ನು ರಚಿಸುವುದು, ಉದ್ಯೋಗ ಖಾತರಿ ನಿಧಿಯನ್ನು ಸ್ಥಾಪಿಸುವುದು, ರಾಜ್ಯದ ಪಾಲನ್ನು ಬಿಡುಗಡೆ ಮಾಡಲು ಅಗತ್ಯವಿರುವ ಅನುದಾನವನ್ನು ಆಯವ್ಯಯದಲ್ಲಿ ಒದಗಿಸುವುದು. 'ನಿಗದಿತ ಗ್ರಾಮೀಣ ದರಗಳ' ಅನುಸೂಚಿ ಪ್ರಕಟಿಸುವುದು. ಯೋಜನೆಯ ಪರಿಣಾಮ ತಿಳಿಯಲು ಮೌಲ್ಯಮಾಪನ ಮಾಡಿಸುವುದು ರಾಜ್ಯ ಮಟ್ಟದ ಜವಾಬ್ದಾರಿಯಾಗಿರುತ್ತದೆ.

**೭. ಸರ್ಕಾರೇತರ (ಎನ್.ಜಿ.ಓ.) ಸಂಸ್ಥೆಗಳ ಪಾತ್ರ**

ಈ ಯೋಜನೆಯಡಿ ಕೆಲಸ ಮಾಡುವ ಕಾರ್ಮಿಕರ ಹಕ್ಕುಗಳ ಸಂರಕ್ಷಣೆ, ಸಾಮಾರ್ಥ್ಯಾಭಿವೃದಿ, ಸಾಮಾಜಿಕ ಲೆಕ್ಕ ಪರಿಶೋಧನೆ, ಇತ್ಯಾದಿ ಪ್ರಕ್ರಿಯೆಗಳ ಮೇಲ್ವಿಚಾರಣೆಗೆ ಅನುಕೂಲವಾಗುವಂತೆ ಪಾಲುದಾರರಾಗಿ ಸರ್ಕಾರೇತರ ಸಂಸ್ಥೆಗಳು ಭಾಗವಹಿಸಬಹುದಾಗಿದೆ.

**೮. ಕಾಮಗಾರಿಗಳ ಮುಕ್ತಾಯ ಹಾಗೂ ನಿರ್ವಹಣೆ**

ಪ್ರತಿ ಗ್ರಾಮ ಪಂಚಾಯಿತಿ ಮತ್ತು ಪ್ರತಿ ಕಾರ್ಯನಿರ್ವಾಹಣಾ ಏಜೆನ್ಸಿಗಳು ಮಂಜೂರಾದ, ಅನುಷ್ಠಾನಗೊಳಿಸಿದ ಮತ್ತು ಮುಕ್ತಾಯಗೊಂಡ ಕಾಮಗಾರಿಗಳ ವಿವರಗಳನ್ನು ವಹಿಯಲ್ಲಿ ದಾಖಲಿಸಿ ನಿರ್ವಹಿಸಬೇಕು. ಮುಕ್ತಾಯವಾದ ವರದಿಯೊಂದಿಗೆ ಕಾರ್ಯನಿರ್ವಹಣಾ ಏಜೆನ್ಸಿ ಕಾಮಗಾರಿಗಳನ್ನು ಅಂತಿಮಗೊಳಿಸಬೇಕು.

**೯. ಜಾಗೃತಿ ಮತ್ತು ಗುಣ ನಿಯಂತ್ರಣ**

ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಮೇಲ್ವಿಚಾರಣೆ ಮಾಡಲು ಸ್ವತಂತ್ರವಾದ ಜಾಗೃತಿ ಮತ್ತು ಗುಣ ನಿಯಂತ್ರಣ ತಂಡಗಳನ್ನು ರಚಿಸಲು ಅವಕಾಶವಿರುತ್ತದೆ. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ ೬೧(ಎ) ಅಡಿಯಲ್ಲಿ ಪ್ರತಿ ಗ್ರಾಮಕ್ಕೆ ರಚಿಸಲಾಗಿರುವ ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿ ಈ ಯೋಜನೆಯಡಿಯಲ್ಲಿ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯಾಗಿಯೂ ಕಾರ್ಯನಿರ್ವಹಿಸಬಹುದು.

**೧೦. ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ**

ಶೇ. ೧೦೦ ರಷ್ಟು ಕಾಮಗಾರಿಗಳನ್ನು ತಾಲ್ಲೂಕು ಮಟ್ಟದ ಅಧಿಕಾರಿಗಳು, ಕನಿಷ್ಠ ಶೇ. ೧೦ರಷ್ಟು ಕಾಮಗಾರಿಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು, ಕನಿಷ್ಠ ಶೇ. ೨ ರಷ್ಟು ಕಾಮಗಾರಿಗಳನ್ನು ರಾಜ್ಯಮಟ್ಟದ ಅಧಿಕಾರಿಗಳು ತಪಾಸಣೆ ಮಾಡಬೇಕು. ಯೋಜನೆಯ ಸಮರ್ಪಕ ಅನುಷ್ಠಾನದ

ಮೇಲ್ವಿಚಾರಣೆಗಾಗಿ ಉಸ್ತುವಾರಿ ಮತ್ತು ಮಾಹಿತಿ ವ್ಯವಸ್ಥೆಯ (Monitoring and information system) ನಮೂನೆಯನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಭರ್ತಿ ಮಾಡಿ ಕಾರ್ಯಕ್ರಮ ಅಧಿಕಾರಿಗಳಿಗೆ ಕಳುಹಿಸಬೇಕು. ಗ್ರಾಮ ಪಂಚಾಯಿತಿಯಿಂದ ಬಂದ ಮಾಹಿತಿಯನ್ನು ಕಾರ್ಯಕ್ರಮ ಅಧಿಕಾರಿ ಕ್ರೋಢೀಕರಿಸಿ, ವಿಶ್ಲೇಷಣೆ ಮಾಡಿ, ಸೂಕ್ತ ಪರಿಹಾರಗಳನ್ನು ತೆಗೆದುಕೊಂಡು ತನ್ನ ಷರಾದೊಂದಿಗೆ ವರದಿಗಳನ್ನು ಪ್ರತಿ ತಿಂಗಳೂ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗೆ ಸಲ್ಲಿಸಬೇಕು. ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಯು, ಕಾರ್ಯಕ್ರಮ ಅಧಿಕಾರಿಯಿಂದ ಬಂದ ಮಾಹಿತಿ ವರದಿ ಕ್ರೋಢೀಕರಿಸಿ ರಾಜ್ಯ ಕಾರ್ಯಕ್ರಮ ಸಮನ್ವಯಾಧಿಕಾರಿಗೆ ಪ್ರತಿ ತಿಂಗಳು ಸಲ್ಲಿಸಬೇಕು.

**೧೧. ಕುಂದು – ಕೊರತೆಗಳ ನಿವಾರಣಾ ವ್ಯವಸ್ಥೆ**

ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಜಿಲ್ಲಾ ಮಟ್ಟದಲ್ಲಿ, ಕಾರ್ಯಕ್ರಮಾಧಿಕಾರಿ ತಾಲ್ಲೂಕು ಮಟ್ಟದಲ್ಲಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ತಮಗೆ ಬಂದಂತಹ ದೂರುಗಳನ್ನು ಒಂದು ವಾರದೊಳಗೆ ವಿಚಾರಣೆ ಕ್ರಮ ಪ್ರಾರಂಭಿಸಬೇಕ. ದೂರು/ ವರದಿ ಸ್ವೀಕರಿಸಿದ್ದಕ್ಕೆ ಮತ್ತು ಅವುಗಳ ಮೇಲೆ ತೆಗೆದುಕೊಂಡ ಕ್ರಮಗಳ ಬಗ್ಗೆ ವಿವರಗಳನ್ನು ಪ್ರತಿ ಹಂತದಲ್ಲಿ ನಿರ್ವಹಿಸಲಾದ "ಕುಂದು ಕೊರತೆಗಳ ವಹಿ" ಯಲ್ಲಿ ದಾಖಲಿಸಬೇಕು.

**೪.೬ ಹಣಕಾಸು ನಿರ್ವಹಣೆ**

ಯಾವುದೇ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಬೇಕಾದಲ್ಲಿ, ಆ ಯೋಜನೆಯಲ್ಲಿ ತೊಡಗಿಸಲಾದ ಹಣಕಾನಿಸ ಸಮರ್ಪಕ ನಿರ್ವಹಣೆ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ಹಣಕಾಸಿನ ನಿರ್ವಹಣೆಯಲ್ಲಿ ಲೋಪ ಉಂಟಾದಾಗ ಯೋಜನೆಯ ಆಶಯಗಳು ಪೂರ್ಣಪ್ರಮಾಣದಲ್ಲಿ ಫಲಿಸುವುದಿಲ್ಲ. ಸರ್ಕಾರವು ಜಾರಿಗೊಳಿಸಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯಲ್ಲಿ ಹಣಕಾಸಿಗೆ ಸಂಬಂಧಿಸಿದ ಲೆಕ್ಕಪತ್ರಗಳ ನಿರ್ವಹಣೆ ಹಾಗೂ ಅನುಸರಿಸಬೇಕಾದ ನಿಯಮಾವಳಿಗಳ ಬಗ್ಗೆ ವಿಶೇಷ ಗಮನಹರಿಸಬೇಕಿದೆ.

**೧. ಅನುದಾನ**

ಯೋಜನೆಯ ಅನುಷ್ಠಾನಕ್ಕೆ ಬೇಕಾಗುವ ಅನುದಾನದ ಶೇ. ೯೦ ರಷ್ಟನ್ನು ಕೇಂದ್ರ ಸರ್ಕಾರವು ಹಾಗೂ ಉಳಿದ ಶೇ. ೧೦ ರಷ್ಟನ್ನು ರಾಜ್ಯ ಸರ್ಕಾರವು ಒದಗಿಸುತ್ತದೆ.

**೨. ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವ ವೆಚ್ಚ**

ಅ) ಅಕುಶಲ ಕೂಲಿ ವೆಚ್ಚ : ಯೋಜನಾ ಕಾಮಗಾರಿಗಳಲ್ಲಿ ಪಾಲ್ಗೊಳ್ಳುವ ಅಕುಶಲ ಕಾರ್ಮಿಕರ ಕೂಲಿ ವೆಚ್ಚದ ಶೇ. ೧೦೦ ರಷ್ಟನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು.

ಆ) ಸಾಮಗ್ರಿ ವೆಚ್ಚ : ಈ ಶೀರ್ಷಿಕೆಯಲ್ಲಿ ಕೆಳಕಂಡ ಬಾಬ್ತುಗಳ ವೆಚ್ಚ ಸೇರಿದೆ.

೧) ಯೋಜನಾ ಅನುಷ್ಠಾನಕ್ಕೆ ಬೇಕಾದ ಸಾಮಗ್ರಿ

೨) ಕುಶಲ ಮತ್ತು ಅರೆ ಕುಶಲ ಕಾರ್ಮಿಕರ ಕೂಲಿ

೩) ಯಂತ್ರೋಪಕರಣಗಳ ವೆಚ್ಚ

ಕೇಂದ್ರ ಸರ್ಕಾರದ ಅನುದಾನದಲ್ಲಿ ಒಟ್ಟು ಸಾಮಗ್ರಿ ವೆಚ್ಚದ ಶೇ. ೭೫ ರಷ್ಟನ್ನು ಭರಿಸಲಾಗುವುದು.

ಇ) ಆಡಳಿತಾತ್ಮಕ ವೆಚ್ಚ : ಈ ಶೀರ್ಷಿಕೆಯಲ್ಲಿ ಕೆಳಕಂಡ ಬಾಬ್ತುಗಳ ವೆಚ್ಚ ಸೇರಿದೆ.

೧) ಮಾಹಿತಿ, ಶಿಕ್ಷಣ ಮತ್ತು ಸಂವಹನ : ಇದರಲ್ಲಿ ಯೋಜನೆಯ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವಂತಹ ಎಲ್ಲಾ ಕಾರ್ಯಗಳು ಸೇರಿವೆ.

೨) ಮಾಹಿತಿ ನಿರ್ವಹಣೆ ಮತ್ತು ಕಾರ್ಯಾಚರಣೆ : ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದ ಎಲ್ಲಾ ಪ್ರಕ್ರಿಯೆಗಳ ಪೂರ್ಣ ಮಾಹಿತಿಯನ್ನು ವಿವಿಧ ಏಜೆನ್ಸಿಗಳಿಂದ ಪಡೆದು ಕ್ರೋಢೀಕರಿಸಿ ಸಕ್ಷಮ ಅಧಿಕಾರಿಗಳೀಗೆ ಸಲ್ಲಿಸಲಾಗುವುದು. ಇದಕ್ಕೆ ಪೂರಕವಾಗಿ ಬೇಕಾದ ಗಣಕಯಂತ್ರ, ತಂತ್ರಾಂಶ ಇತ್ಯಾದಿಗಳಿಗೆ ಸಂಬಂಧಿಸಿದ ವೆಚ್ಚವನ್ನು ಈ ಶೀರ್ಷಿಕೆಯಲ್ಲಿ ಭರಿಸಲಾಗುವುದು.

೩) ಸಿಬ್ಬಂದಿಯ ವೆಚ್ಚ : ಯೋಜನೆ ಅನುಷ್ಠಾನಕ್ಕೆ ಬೇಕಾದ ಕೆಳಕಂಡ ಸಿಬ್ಬಂದಿಯನ್ನು ನೇಮಿಸಿಕೊಳ್ಳಲು ಅವಕಾಶವಿದೆ.

i) ಗ್ರಾಮ ಅಭಿವೃದ್ಧಿ ಸಹಾಯಕರು : ಇವರು ಗ್ರಾಮ ಪಂಚಾಯಿತಿಯ ಕಾರ್ಯದರ್ಶಿಗೆ ಯೋಜನೆಯ ಅನುಷ್ಠಾನದ ಎಲ್ಲಾ ಪ್ರಕ್ರಿಯೆಗಳಲ್ಲಿ ಸಹಾಯ ಮಾಡುವರು. ಉದಾ : ಕುಟುಂಬಗಳ ನೋಂದಣಿ, ಉದ್ಯೋಗಕ್ಕಾಗಿ ಅರ್ಜಿ ಸ್ವೀಕಾರ, ಕಾಮಗಾರಿಗಳ ಹಂಚಿಕೆ, ಎನ್.ಎಂ.ಆರ್. ವಿತರಣೆ, ಕಾಮಗಾರಿ ಸ್ಥಳ ಪರಿಶೀಲನೆ, ಸಂಬಂಧಿತ ವಹಿಗಳ ನಿರ್ವಹಣೆ ಇತ್ಯಾದಿ.

ii) ಇಂಜಿನಿಯರ್ : ಯೋಜನೆಯ ಕಾಮಗಾರಿಗಳ ಅಂದಾಜು ಪಟ್ಟಿ ತಯಾರಿಸುವುದು ಕಾಮಗಾರಿಗಳ ಉಸ್ತುವಾರಿ ಇತ್ಯಾದಿ ಕೆಲಸಗಳಿಗೆ ಇಲಾಖಾ ಇಂಜಿನಿಯರ್‌ಗಳಿಗೆ ಸಹಾಯ ಮಾಡಲು ಇಂಜಿನಿಯರ್‌ಗಳ ಸೇವೆಯನ್ನು ಖಾಸಗಿಯಾಗಿ ಪಡೆಯಬಹುದು.

iii) ಸಹಾಯಕ ಕಾರ್ಯಕ್ರಮ ಅಧಿಕಾರಿ : ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿ ಈ ಯೋಜನೆಯ ಕಾರ್ಯಕ್ರಮ ಅಧಿಕಾರಿಯಾಗಿರುತ್ತಾರೆ. ಇವರು ಸಂಬಂಧಿತ ತಾಲ್ಲೂಕಿನಲ್ಲಿನ ಯೋಜನೆಯ ಸಮರ್ಪಕ ಅನುಷ್ಠಾನದ ಎಲ್ಲಾ ಪ್ರಕ್ರಿಯೆಗಳ ಮೇಲುಸ್ತುವಾರಿ ನೋಡಿಕೊಳ್ಳುವ ಅತ್ಯಂತ ಗುರುತರವಾದ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಈ ಕಾರ್ಯದಲ್ಲಿ ಇವರಿಗೆ ಸಹಾಯ ಮಾಡಲು ಸಹಾಯಕ ಕಾರ್ಯಕ್ರಮ ಅಧಿಕಾರಿಯೊಬ್ಬರನ್ನು ನೇಮಿಸಿಕೊಳ್ಳಬಹುದಾಗಿದೆ.

iv) ಗಣಕಯಂತ್ರ ಮತ್ತು ಲೆಕ್ಕ ಸಹಾಯಕ : ಗ್ರಾಮ ಪಂಚಾಯತಿಗಳಲ್ಲಿ ಲೆಕ್ಕಪತ್ರ ನಿರ್ವಹಣೆಗೆ ಕಾರ್ಯದರ್ಶಿಯವರಿಗೆ ಸಹಾಯ ಮಾಡಲು ಲೆಕ್ಕ ಪತ್ರ ಸಹಾಯಕರುಗಳ ಸೇವೆಯನ್ನು ಪಡೆಯಬಹುದಾಗಿದೆ.

೪) ಸಾಮರ್ಥ್ಯ ಅಭಿವೃದ್ಧಿ : ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಭಾಗವಹಿಸುವ ಎಲ್ಲಾ ಸಿಬ್ಬಂದಿಗೆ ಮತ್ತು ಜನಪ್ರತಿನಿಧಿಗಳಿಗೆ ಅವರುಗಳ ಸಾಮರ್ಥ್ಯವನ್ನು ವೃದ್ಧಿಗೊಳಿಸಿ ಯೋಜನೆಯ ಯಶಸ್ವಿ ಅನುಷ್ಠಾನಕ್ಕೆ ಪೂರಕವಾಗಿ ತರಬೇತಿ ನೀಡಲಾಗುವುದು. ಮೇಲಿನ ಎಲ್ಲಾ ಆಡಳಿತಾತ್ಮಕ ವೆಚ್ಚಗಳನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

೫) ಸಾಮಾಜಿಕ ಲೆಕ್ಕ ಪರಿಶೋಧನೆ : ಸಮಾಜಿಕ ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಎಲ್ಲಾ ವೆಚ್ಚಗಳನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

೬) ಕುಂದು ಕೊರತೆ ನಿವಾರಣೆ : ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಸಾರ್ವಜನಿಕರು ನೀಡಬಹುದಾದ ಎಲ್ಲಾ ದೂರುಗಳನ್ನು ಸ್ವೀಕರಿಸಿ, ಪರಿಶೀಲಿಸಿ, ಸರಿಪಡಿಸಲು ಸೂಕ್ತಕ್ರಮ ತೆಗೆದುಕೊಳ್ಳಲು ಅನುಕೂಲವಾಗುವಂತೆ ಕುಂದುಕೊರತೆ ನಿವಾರಣಾ ಸಮಿತಿಯನ್ನು ರಚಿಸಲಾಗುವುದು ಇದಕ್ಕಾಗಿ ತಗಲುವ ಎಲ್ಲಾ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

ಈ) ಕೆಲಸದ ಸ್ಥಳದಲ್ಲಿ ಒದಗಿಸಬೇಕಾದ ಸೌಲಭ್ಯಗಳು : ಕೇಂದ್ರದ ಅಧಿನಿಯಮಯದ ಪರಿಶಿಷ್ಟ ಐಐರಲ್ಲಿ ತಿಳಿಸುರುವಂತೆ ಕೆಲಸದ ಸ್ಥಳದಲ್ಲಿ ಕಾರ್ಮಿಕರಿಗೆ ಕೆಳಕಂಡ ಸೌಲಭ್ಯ ಒದಗಿಸಬೇಕಾಗಿದೆ.

೧. ಕೆಲಸದಲ್ಲಿ ನಿರತಾನದ ಯಾವುದೇ ಕಾರ್ಮಿಕರಿಗೆ ಕಾಮಗಾರಿಯ ಕಾರಣದಿಂದಾಗಿ ಅಪಘಾತವಾದಲ್ಲಿ ಅದಕ್ಕೆ ಪೂರಕವಾದ ಚಿಕಿತ್ಸಾ ವೆಚ್ಚವನ್ನು ಉಚಿತವಾಗಿ ಒದಗಿಸಲಾಗುವುದು.

೨. ಅಪಘಾತಕ್ಕೆ ಒಳಗಾದ ಕಾರ್ಮಿಕನಿಗೆ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ಚಿಕಿತ್ಸೆ ನೀಡಬೇಕಾದಂತಹ ಸಂದರ್ಭದಲ್ಲಿ ಉಚಿತವಾಗಿ ಅವಶ್ಯಕವಾದ ಔಷಧಿಗಳನ್ನು ನೀಡುವುದರೊಂದಿಗೆ, ಕೆಲಸ ನಿರ್ವಹಿಸಿದ್ದಲ್ಲಿ ನೀಡಬೇಕಾಗಿದ್ದ ಕೂಲಿಯ ಅರ್ಧದಷ್ಟು ಮೊತ್ತವನ್ನು ದಿನಭತ್ಯೆಯಾಗಿ ಪಾವತಿಸಬೇಕಾಗುವುದು. ಅಥವಾ ಕೇಂದ್ರ ಸರ್ಕಾರ ನಿಗದಿಪಡಿಸಬಹುದಾದ ಪರಿಹಾರ ನೀಡಬೇಕಾಗುತ್ತದೆ.

೩. ಅಪಘಾತಕ್ಕೀಡಾದ ವ್ಯಕ್ತಿಗೆ ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ಅಥವಾ ಮರಣಹೊಂದಿದಲ್ಲಿ ಆತನ ಕುಟುಂಬದವರಿಗೆ ೨೫,೦೦೦/- ರೂಪಾಯಿಗಳ ಪರಿಹಾರ ಮೊತ್ತವನ್ನು ನೀಡಬೇಕಾಗುವುದು.

೪. ಕೆಲಸದ ಸ್ಥಳದಲ್ಲಿ ಶುದ ಕುಡಿಯುವ ನೀರು, ಪ್ರಥಮ ಚಿಕಿತ್ಸಾ ಪೆಟ್ಟಿಗೆ ಒದಗಿಸಬೇಕಾಗುತ್ತದೆ. ಕೂಲಿಕಾರರ ಮಕ್ಕಳಿಗೆ ನೆರಳನ್ನು ಒದಗಿಸಬೇಕಾಗುತ್ತದೆ.

೫. ಕೆಲಸಕ್ಕೆ ಬರುವ ಕಾರ್ಮಿಕರ ಜೊತೆಯಲ್ಲಿ ಬರುವ ೬ ವರ್ಷ ಒಳಗಿನ ಮಕ್ಕಳ ಸಂಖ್ಯೆ ೫ ಕ್ಕಿಂತ ಹೆಚ್ಚಾಗಿದ್ದಲ್ಲಿ, ಕೆಲಸಕ್ಕೆ ಬಂದಂತಹ ಓರ್ವ ಮಹಿಳಾ ಕಾರ್ಮಿಕರನ್ನು ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ನೇಮಿಸಬೇಕು. ಇವರಿಗೆ ನಿಗದಿತ ದರದಲ್ಲಿ ಕೂಲಿಯನ್ನು ನೀಡಬೇಕು.

೬. ಕೆಲಸಕ್ಕೆ ಬಂದಂತಹ ಕಾರ್ಮಿಕರೊಡನೆ ಬಂದಿರುವ ಮಕ್ಕಳು ಅಪಘಾತಕ್ಕೀಡಾದಲ್ಲಿ ಅವರಿಗೆ ಉಚಿತ ವೈದ್ಯಕೀಯ ಚಿಕಿತ್ಸೆ ಒದಗಿಸಬೇಕು.

೭. ಅಪಘಾತಕ್ಕೀಡಾದ ಮಕ್ಕಳು ಶಾಶ್ವತ ಅಂಗವೈಕಲ್ಯ ಹೊಂದಿದಲ್ಲಿ ಅವರಿಗೂ ಸಹ ೨೫,೦೦೦/- ರೂಪಾಯಿಗಳ ಪರಿಹಾರ ಧನವನ್ನು ನೀಡಬೇಕು.

ಮೇಲಿನ ಎಲ್ಲಾ ಸೌಲಭ್ಯಗಳ ಸಂಬಂಧಿಸಿದ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು.

ಉ) ಯೋಜನೆ ತಯಾರಿಕೆ : ಯೋಜನೆಯನ್ನು ಸಿದಪಡಿಸಲು ತಗಲುವ ಎಲ್ಲಾ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು.

**೩. ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗದ ವೆಚ್ಚ**

ಕೇಂದ್ರ ಸರ್ಕಾರದ ಅನುದಾನದಿಂದ ಕೆಳಕಂಡ ಆಡಳಿತಾತ್ಮಕ ವೆಚ್ಚದ ಬಾಬ್ತುಗಳನ್ನು ಭರಿಸಲು ಅವಕಾಶವಿರುವುದಿಲ್ಲ.

೧. ಸರ್ಕಾರಿ ಸಿಬ್ಬಂದಿಗಳ ವೇತನ

೨. ಹೊಸ ವಾಹನಗಳ ಖರೀದಿ

೩. ಹಳೆ ವಾಹನಗಳ ರಿಪೇರಿ

೪. ಸಿವಿಲ್ ಕಾಮಗಾರಿಗಳು

**೪. ರಾಜ್ಯ ಸರ್ಕಾರದ ಅನುದಾನದಿಂದ ಭರಿಸಲಾಗುವ ವೆಚ್ಚ**

ಕೆಳಕಂಡ ಬಾಬ್ತುಗಳಿಗೆ ಸಂಬಂಧಿಸಿದ ವೆಚ್ಚವನ್ನು ರಾಜ್ಯ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

೧. ಸಾಮಗ್ರಿಗಳ ವೆಚ್ಚದ ಶೇ. ೨೫ ರಷ್ಟು

- ಸಾಮಗ್ರಿ ವೆಚ್ಚದ ವಿವರ ಮೇಲಿನ ಕಂಡಿಕೆ ೨ರ ಉಪಕಂಡಿಕೆ (ಆ) ರಂತೆ

೨. ನಿರುದ್ಯೋಗ ಭತ್ಯೆ

ರಾಜ್ಯ ಸರ್ಕಾರದ ಯೋಜನೆಯ ಕಂಡಿಕೆ ಐದರಲ್ಲಿ ತಿಳಿಸಿದಂತೆ, ಪಾವತಿಸಲಾಗುವುದು ನಿರುದ್ಯೋಗ ಭತ್ಯೆಯ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರದ ಅನುದಾನದಿಂದ ಭರಿಸಬೇಕಾಗುತ್ತದೆ. ಉದ್ಯೋಗಕಾಂಕ್ಷಿಗಳಿಗೆ ಉದ್ಯೋಗ ನೀಡಬೇಕಾಗಿದ್ದು ಅಧಿನಿಯಮದಂತೆ ಕಡ್ಡಾಯವಾಗಿರುವುದರಿಂದ, ಉದ್ಯೋಗ ನೀಡದಿರುವುದಕ್ಕೆ ಪಾವತಿಸಬೇಕಾದ ನಿರುದ್ಯೋಗ ಭತ್ಯೆಯ ಜವಾಬ್ದಾರಿಯನ್ನು ಕೇಂದ್ರ ಸರ್ಕಾರ ತೆಗೆದುಕೊಳ್ಳುವುದಿಲ್ಲ. ಇದರ ಹೊಣೆಗಾರಿಕೆ ಸಂಪೂರ್ಣವಾಗಿ ರಾಜ್ಯ ಸರ್ಕಾರದ್ದಾಗಿರುತ್ತದೆ.

೩. ರಾಜ್ಯ ಉದ್ಯೋಗ ಖಾತರಿ ಪರಿಷತ್ತಿನ ಆಡಳಿತಾತ್ಮಕ ವೆಚ್ಚ

೪. ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಆದರೆ ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಪ್ರಕಾರ ಖರ್ಚು ಮಾಡಲಾಗುವ ಬಾಬ್ತುಗಳ ವೆಚ್ಚ.

**೫. ಅನುದಾನ ಹಂಚಿಕೆಯ ಪ್ರಕ್ರಿಯೆ**

ಗ್ರಾಮ ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕಾರ್ಯಕ್ರಮ ಅಧಿಕಾರಿಯು ಅನುದಾನ ಬಿಡುಗಡೆ ಮಾಡುವರು.

ತಾಲ್ಲೂಕು ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಗಳು ಕಾರ್ಯಕ್ರಮ ಅಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡುವರು.

ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ, ರಾಜ್ಯ ಸರ್ಕಾರದ ಮೂಲಕ ಸಲ್ಲಿಸುವ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕೇಂದ್ರ ಸರ್ಕಾರದಿಂದ ಅನುದಾನವನ್ನು ನೇರವಾಗಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುವುದು. ಇದರ ಜೊತೆಯಲ್ಲಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುವುದು.

ಪ್ರತಿ ಅನುಷ್ಠಾನ ಏಜೆನ್ಸಿಯು ಅನುದಾನಕ್ಕಾಗಿ ಬೇಡಿಕೆ ಸಲ್ಲಿಸುವಾಗ, ಹಿಂದೆ ಬಿಡುಗಡೆ ಮಾಡಿದ ಅನುದಾನದಲ್ಲಿ ಶೇ. ೬೦ ರಷ್ಟು ಖರ್ಚು ಮಾಡಿರುವ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

**೬. ಬ್ಯಾಂಕ್ ಖಾತೆಗಳಲ್ಲಿ ನಿಧಿ ನಿರ್ವಹಣೆ**

(೧) ಪ್ರತಿ ಅನುಷ್ಠಾನ ಏಜೆನ್ಸಿಯು ಈ ಯೋಜನೆಯ ವ್ಯವಹಾರಕ್ಕಾಗಿ ಪ್ರತ್ಯೇಕ ಬ್ಯಾಂಕ್ ಖಾತೆಯನ್ನು ಹೊಂದಿರತಕ್ಕದ್ದು; ಗ್ರಾಮ ಪಂಚಾಯತ್‌ಗಳಲ್ಲಿ ಕಾರ್ಯದರ್ಶಿ ಮತ್ತು ಅಧ್ಯಕ್ಷರ ಹೆಸರಿನ ಜಂಟಿ ಖಾತೆಯಲ್ಲಿ ನಿಧಿಯನ್ನು ನಿರ್ವಹಿಸಲಾಗುತ್ತದೆ.

(೨) ಅನುಷ್ಠಾನ ಏಜೆನ್ಸಿ ಯಾವುದೇ ಆದರೂ ಕೂಲಿ ಪಾವತಿಯನ್ನು ಗ್ರಾಮ ಪಂಚಾಯಿತಿ ಮೂಲಕ ಮಾತ್ರ ಮಾಡಲಾಗುವುದು ಇದಕ್ಕಾಗಿ ಪ್ರತಿ ಕುಟುಂಬಕ್ಕೆ ಅಥವಾ ಕುಟುಂಬದ ಸದಸ್ಯರು ಇಚ್ಛಿಸಿದಲ್ಲಿ ವೈಯಕ್ತಿಕವಾಗಿ ಗ್ರಾಮದಲ್ಲಿನ ಬ್ಯಾಂಕ್ ಅಥವಾ ಅಂಚೆ ಕಛೇರಿಯಲ್ಲಿ ಉಳಿತಾಯ ಖಾತೆ ಹೊಂದಿರತಕ್ಕದ್ದು.

(೩) ಕೆಲಸ ಮಾಡಿದ ಕಾರ್ಮಿಕರಿಗೆ ಅವರುಗಳ ಕೂಲಿ ಮೊಬಲಗನ್ನು ನೇರವಾಗಿ ಅವರ ಬ್ಯಾಂಕ್ ಅಥವಾ ಅಂಚೆ ಕಛೇರಿಯ ಖಾತೆಗೆ ಜಮಾ ಮಾಡಲಾಗುವುದು. ಯಾವುದೇ ಕಾರಣಕ್ಕೂ ಕಾರ್ಮಿಕರಿಗೆ ಕೂಲಿಯ ಮೊಬಲಗನ್ನು ನಗದಾಗಿ ಪಾವತಿಸುವಂತಿಲ್ಲ.

(೪) ಪಾವತಿಸಿದ ಕೂಲಿ ಮೊಬಲಗಿನ ವಿವರವನ್ನು ಗ್ರಾಮ ಪಂಚಾಯಿತಿಯಲ್ಲಿ ನಿರ್ವಹಿಸುವ ಉದ್ಯೋಗ ಮತ್ತು ಉದ್ಯೋಗಾಕಾಂಕ್ಷಿಗಳ ವಹಿಯಲ್ಲಿ (ನಮೂನೆ - ೩) ದಾಖಲಿಸಲಾಗುವುದು. ಜೊತೆಯಲ್ಲಿ ಈ ವಿವರಗಳನ್ನು ಪ್ರತಿ ಕುಟುಂಬಕ್ಕೆ ನೀಡಿರುವ ಕುಟುಂಬ ಉದ್ಯೋಗ ಚೀಟಿ

(ನಮೂನೆ - ೪) ರಲ್ಲಿ ದಾಖಲಿಸಬೇಕು. ಇದರಿಂದ ಪ್ರತಿ ಕುಟುಂಬಕ್ಕೆ ೧೦೦ ದಿನಗಳ ಉದ್ಯೋಗವನ್ನು ಒದಗಿಸಿರುವ ಬಗ್ಗೆ ವಿವರಗಳು ಲಭ್ಯವಾಗುತ್ತವೆ.

**೭. ಲೆಕ್ಕ ಕಡತಗಳ ನಿರ್ವಹಣೆ**

ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳಲ್ಲಿ ಈ ಯೋಜನೆಯು ಹಣಕಾಸಿನ ವ್ಯವಹಾರಗಳನ್ನು ಸಂಬಂಧಿಸಿದ ಆಯ-ವ್ಯಯ ಮತ್ತು ಹಣಕಾಸು ನಿಯಮಗಳಲ್ಲಿನ ನಿರ್ದೇಶನದಂತೆ ನಿರ್ವಹಿಸತಕ್ಕದ್ದು. ಗ್ರಾಮ ಪಂಚಾಯಿತಿಗಳಲ್ಲಿ ದಿನಾಂಕ : ೦೧-೦೪-೨೦೦೭ ರಿಂದ ಜಾರಿಗೆ ಬಂದಿರುವ ಗ್ರಾಮ ಪಂಚಾಯಿತಿಯ ಆಯ-ವ್ಯಯ ಮತ್ತು ಲೆಕ್ಕಗಳ ಹೊಸನಿಯಮಗಳು - ೨೦೦೬ ರಂತೆ ಜೋಡಿ ನಮೂದು ಪದ್ಧತಿಗಳಲ್ಲಿ ನಿರ್ವಹಿಸತಕ್ಕದ್ದು.

**೮. ಲೆಕ್ಕ ಪರಿಶೋಧನೆ**

ಈ ಯೋಜನೆಯ ಹಣಕಾಸು ವ್ಯವಹಾರಗಳಿಗೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನಾ ಕಾರ್ಯ.ವನ್ನು ಪಂಚಾಯಿತಿಗಳ ಶಾಸನಬದ್ಧ ಲೆಕ್ಕ ಪರಿಶೋಧಕರಿಂದ ಅಂದರೆ, ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್‌ಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಮಹಾಲೇಖಪಾಲರು ಹಾಗೂ ಗ್ರಾಮ ಪಂಚಾಯಿತಿಗಳಿಗೆ ರಾಜ್ಯ ಲೆಕ್ಕಪತ್ರ ಇಲಾಖೆಯ ನಿಯಂತ್ರಕರು ಲೆಕ್ಕ ಪರಿಶೋಧನಾ ಕಾರ್ಯವನ್ನು ಕೈಗೊಳ್ಳುವರು.

**೯. ಸಾಮಾಜಿಕ ಲೆಕ್ಕ ಪರಿಶೋಧನೆ**

ಎಲ್ಲಾ ಪ್ರಕ್ರಿಯೆಗಳಲ್ಲಿ ಯೋಜನೆಯ ಅನುಷ್ಠಾನ ಮತ್ತು ಮೌಲ್ಯಮಾಪನ ಪಾರದರ್ಶಕವಾಗಿರಲು ಸಾರ್ವಜನಿಕರ ಭಾಗವಹಿಸುವಿಕೆ ಅವಶ್ಯಕ.

ಈ ಯೋಜನೆಯ ಮುಖ್ಯ ಉದ್ದೇಶ ಕಾರ್ಮಿಕರಿಗೆ ಉದ್ಯೋಗ ಒದಗಿಸುವುದಾಗಿದ್ದು, ಅವರಿಗೆ ದೊರೆಯಬೇಕಾಗಿರುವ ನ್ಯಾಯಯುತವಾದ ಹಕ್ಕುಗಳ ಬಗ್ಗೆ ಸಾಮಾಜಿಕ ತಪಾಸಣೆಯನ್ನು ಯೋಜನೆಯ ಅನುಷ್ಠಾನದ ಮೊದಲು, ಅನುಷ್ಠಾನದ ಸಮಯದಲ್ಲಿ ಮತ್ತು ಅನುಷ್ಠಾನದ ನಂತರ ನಡೆಸಲಾಗುವುದು. ಈ ಸಂದರ್ಭದಲ್ಲಿ ಕೆಳಕಂಡ ಅಂಶಗಳ ವಿವರಗಳನ್ನು ನಿಯಮಾನುಸಾರ ಪಾಲಿಸಲಾಗಿದೆಯೇ ಎಂಬ ಬಗ್ಗೆ ಪರಿಶೀಲಿಸಬೇಕಾಗಿದೆ.

(೧) ನೋಂದಣಿ ಪ್ರಕ್ರಿಯೆ

(೨) ಉದ್ಯೋಗ ಚೀಟಿ ವಿತರಣೆ

(೩) ಉದ್ಯೋಗ ಬೇಡಿಕೆಗಳ ಪರಿಗಣನೆ

(೪) ಕಾಮಗಾರಿಗಳ ಆಯ್ಕೆ ಹಾಗೂ ಮಂಜೂರಾತಿ ಪ್ರಕ್ರಿಯೆಯಲ್ಲಿ ಪಾರದರ್ಶಕತೆ

(೫) ಕಾಮಗಾರಿಗಳ ಅನುಷ್ಠಾನದಲ್ಲಿ ಪಾರದರ್ಶಕತೆ

(೬) ಕೂಲಿ ಪಾವತಿ

(೭) ಲೆಕ್ಕ ತಪಾಸಣೆ ದಾಖಲಾತಿಗಳನ್ನು ಒದಗಿಸುವುದು

(೮) ಗುಣ ನಿಯಂತ್ರಣ ಮತ್ತು ಮೌಲ್ಯಮಾಪನ ವರದಿಗಳ ಪ್ರಕಟಣೆ ಇತ್ಯಾದಿ.

**೧೦. ಮಾಹಿತಿ ಹಕ್ಕು**

ಯೋಜನೆಯ ಅನುಷ್ಠಾನದ ಬಗ್ಗೆ ಗ್ರಾಮ ಪಂಚಾಯಿತಿಯು ತಾನು ಕೈಗೊಂಡಿರುವ ಪ್ರಮುಖ ಕ್ರಮಗಳ ಬಗ್ಗೆ ಮಾಹಿತಿಯನ್ನು ಸ್ವಯಂಪ್ರೇರಿತವಾಗಿ ಗ್ರಾಮಸ್ಥರಿಗೆ ಕಡ್ಡಾಯವಾಗಿ ಒದಗಿಸಬೇಕಾಗಿರುತ್ತದೆ. ಈ ಮಾಹಿತಿಗಳನ್ನು ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನದಲ್ಲಿ ಒಂದು ಮಾಹಿತಿ ಗೋಡೆಯನ್ನು ನಿರ್ಮಿಸಿ ಅದರಲ್ಲಿ ದಾಖಲಿಸತಕ್ಕದ್ದು. ಗೋಡೆಯ ಒಂದು ಭಾಗದಲ್ಲಿ ಬಹುಕಾಲದವರೆಗೆ ಅಗತ್ಯವಿರುವ ಮಾಹಿತಿಗಳಾದ ಕಾಮಗಾರಿ ದರಪಟ್ಟಿ, ಮಾರ್ಪಡಿಸಲಾಗದ ಬಾಬುಗಳು, ಗುರುತಿಸಲಾದ ಕಾಮಗಾರಿಗಳ ಪಟ್ಟಿ, ಇತ್ಯಾದಿಗಳನ್ನು ಬಣ್ಣದಲ್ಲಿ ದಾಖಲಿಸಬೇಕು.

ಗೋಡೆಯ ಇನ್ನೊಂದು ಭಾಗದಲ್ಲಿ ಪ್ರತಿವಾರ ಬದಲಾಗುವ ಮಾಹಿತಿಗಳಾದ, ಅಂದರೆ, ಕೆಲಸ ಮಾಡುವ ಕಾರ್ಮಿಕರ ಸಂಖ್ಯೆ, ಖರೀದಿಸಲಾದ ಮತ್ತು ಉಪಯೋಗಿಸಲಾದ ಸಾಮಗ್ರಿಗಳು ಹಾಗೂ ಇವುಗಳ ವೆಚ್ಚ, ಇತ್ಯಾದಿಗಳನ್ನು ದಾಖಲಿಸಬೇಕು. ಈ ಮಾಹಿತಿಯನ್ನು ವಾರಕ್ಕೊಮ್ಮೆ ಸೂಕ್ತವಾಗಿ ಬದಲಾಯಿಸತಕ್ಕದ್ದು.

**೧೧. ಚುನಾಯಿತ ಪ್ರತಿನಿಧಿಗಳ ಜವಾಬ್ದಾರಿ**

ಹಣಕಾಸು ನಿರ್ವಹಣೆಗೆ ಸಂಬಂಧಿತ ವಿಷಯಗಳಲ್ಲಿ ಸರ್ಕಾರಿ ಸಿಬ್ಬಂದಿಯವರು ಪೂರ್ಣವಾಗಿ ಜವಾಬ್ದಾರರು ಎಂಬ ಧೋರಣೆ ಜನಪ್ರತಿನಿಧಿಗಳಲ್ಲಿ ಸರ್ವೇ ಸಾಮಾನ್ಯವಾಗಿದೆ. ಆದರೆ ಯೋಜನೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ಅಧ್ಯಕ್ಷರು, ಉಪಾಧ್ಯಕ್ಷರು, ಸ್ಥಾಯಿಸಮಿತಿ/ಉಪಸಮಿತಿಯ ಅಧ್ಯಕ್ಷರು/ಸದಸ್ಯರುಗಳು ವಿತ್ತೀಯ ಬಾಧ್ಯತೆಯುಳ್ಳ ನಿರ್ಣಯವನ್ನು ತೆಗೆದುಕೊಳ್ಳುವಂತಹ ಪ್ರಸಂಗಗಳಲ್ಲಿ ಹಣಕಾಸಿನ ನಿಯಮಗಳ ತಿಳುವಳಿಕೆ ಅತ್ಯವಶ್ಯವಾಗಿರುತ್ತದೆ. ಯಾವುದೇ ತಪ್ಪು ನಿರ್ಣಯಗಳಿಂದ ಉಂಟಾಗುವ ಆರ್ಥಿಕ ನಷ್ಟಕ್ಕೆ, ಇಂತಹ ನಡವಳಿಕೆಗಳಲ್ಲಿ ಭಾಗಿಯಾಗಿರುವ ಎಲ್ಲರೂ ಜವಾಬ್ದಾರರಾಗುತ್ತಾರೆ. ಇದಕ್ಕಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ ೨೮೬ ರಲ್ಲಿ ಎಲ್ಲಾ ಚುನಾಯಿತ ಸದಸ್ಯರುಗಳನ್ನು ಸರ್ಕಾರಿ ಉದ್ಯೋಗಿಗಳ ರೀತಿಯಲ್ಲಿಯೇ ಭಾರತ ದಂಡ ಸಂಹಿತೆ ೨೧ ನೇ ಪ್ರಕರಣದಂತೆ ಮತ್ತು ಭ್ರಷ್ಟಾಚಾರ ನಿವಾರಣೆ ಅಧಿನಿಯಮ ೧೯೮೮ ರಲ್ಲಿ ಅರ್ಥೈಸಿರುವಂತೆ ಲೋಕನೌಕರ ಎಂದು ಪರಿಗಣಿಸಲಾಗಿದೆ.

**೪.೭ ವಲಯವಾರು ಕಾಮಗಾರಿಗಳು**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅನ್ವಯ ಅನುಷ್ಠಾನಗೊಳಿಸಬಹುದಾದ ಕಾಮಗಾರಿಗಳನ್ನು ಮುಖ್ಯವಾಗಿ ಮೂರು ವಲಯಗಳಲ್ಲಿ ವಿಂಗಡಿಸಲಾಗಿದೆ.

| ಉತ್ಪಾದನಾ ವಲಯ | ಸಾಮಾಜಿಕ ನ್ಯಾಯ ವಲಯ | ಮೂಲಭೂತ ಸೌಕರ್ಯಗಳು |
|---|---|---|
| ● ಸಣ್ಣ ಕೆರೆಗಳ ನಿರ್ಮಾಣ<br>● ನೀರು ಸಂಗ್ರಹಣೆ<br>● ಸರಕಾರಿ ಶಾಲಾ ಕಟ್ಟಡಗಳ ನಿರ್ಮಾಣ<br>● ಕೆರೆಗಳ ಹೂಳೆತ್ತುವುದು<br>● ತೋಡು ಬಾವಿಗಳ ನಿರ್ಮಾಣ ಮತ್ತು ಹೂಳೆತ್ತುವುದು<br>● ಅರಣ್ಯೀಕರಣ<br>● ಸಣ್ಣ ನೀರಾವರಿ ಕಾಲುವೆಗಳ ನಿರ್ಮಾಣ<br>● ಶಾಲಾ ಕಾಲೇಜುಗಳಿಗಾಗಿ ಆಟದ ಮೈದಾನದ ನಿರ್ಮಾಣ<br>● ಸಣ್ಣ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಗಳು<br>● ಸರಕಾರಿ ತೋಟಗಾರಿಕಾ ಫಾರ್ಮ್‌ಗಳ ನಿರ್ಮಾಣ<br>● ಸರಕಾರಿ ಕೃಷಿ ಫಾರ್ಮ್‌ಗಳ ಅಭಿವೃದ್ಧಿ<br>● ಸರಕಾರಿ ಮೀನುಗಾರಿಕೆ ಕೇಂದ್ರಗಳ ಅಭಿವೃದ್ಧಿ<br>● ಪಶುಸಂಗೋಪಣಾ ಇಲಾಖೆಯ ಮೇವು ಕೇಂದ್ರಗಳ ಅಭಿವೃದ್ಧಿ<br>● ಸರಕಾರಿ ರೇಶ್ಮೆ ಸಾಗಾಣಿಕೆ ಕೇಂದ್ರಗಳ ಅಭಿವೃದ್ಧಿ<br>● ರೈತ ಸಂತೆಗಳ ಅಭಿವೃದ್ಧಿ<br>● ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಸಸ್ಯಗಳನ್ನು ಬೆಳೆಸುವದು (ನರ್ಸರಿ) | ● ಮನೆಗಳಲ್ಲಿ ಮಳೆನೀರು ಪುನಶ್ಚೇತನ<br>● ಮಳೆ ನೀರು ಸಂಗ್ರಹಣಾ ಮತ್ತು ಜಮೀನು ಅಭಿವೃದ್ಧಿ<br>● ಪ.ಜಾತಿ/ಪ.ಪಂ. ಗಳ ಜನರ ಭೂ ಅಭಿವೃದ್ಧಿ ಕಾಮಗಾರಿಗಳು<br>● ಫಲಾನುಭವಿಗಳ ಜಮೀನು ಅಭಿವೃದ್ಧಿ<br>● ಬಡತನ ಲೇಖೆಗಿಂತ ಕೆಳಗಿನ ಕುಟುಂಬಗಳ ಜಮೀನುಗಳ ಅಭಿವೃದ್ಧಿ<br>● ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಜಮೀನುಗಳಿಗೆ ನೀರಾವರಿ ಸೌಲಭ್ಯ<br>● ಸರ್ವ ಋತು ಗ್ರಾಮೀಣ ರಸ್ತೆಗಳು<br>● ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಜಮೀನುಗಳಲ್ಲಿ ತೋಟಗಾರಿಕಾ ಅಭಿವೃದ್ಧಿಪಡಿಸುವುದು<br>● ಆರ್ಥಿಕವಾಗಿ ಹಿಂದುಳಿದ ವರ್ಗದ ಜನರಿಗಾಗಿ ಕೇಂದ್ರ/ರಾಜ್ಯ ಸರಕಾರದ ಗ್ರಾಮೀಣ ವಸತಿ ಯೋಜನೆಗಳ ಫಲಾನುಭವಿಗಳ ಬಡಾವಣೆ ನಿರ್ಮಾಣ | ● ಕುಡಿಯುವ ನೀರಿನ ಮೂಲಗಳ ಅಭಿವೃದ್ಧಿ<br>● ಸಮುದಾಯ ಬಾವಿಗಳ ತೋಡುವಿಕೆ<br>● ಗ್ರಾಮೀಣ ಮೈದಾನದ ನಿರ್ಮಾಣ<br>● ಪ್ರವಾಹ ಸಂರಕ್ಷಣೆ<br>● ಚರಂಡಿಗಳ ನಿರ್ಮಾಣ<br>● ಸ್ಮಶಾನ<br>● ಸಸಿಗಳನ್ನು ನೆಡುವುದು |

**೪.೮ ಕರ್ನಾಟಕದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗಕ್ಕೆ ಸಂಬಂಧಿಸಿದ ಯೋಜನೆಗಳು ಮತ್ತು ಸಮಸ್ಯೆಗಳು :**

ಹಲವು ರಾಜ್ಯ ಸರಕಾರಗಳ ಉಪಕ್ರಮಗಳಾಗಿ ಕಳೆದ ಮೂರು ದಶಕಗಳಿಂದಲೂ ಉದ್ಯೋಗ ಸಂಬಂಧಿತ ಯೋಜನೆಗಳು ಜಾರಿಯಲ್ಲಿ ಬಂದಿವೆ. ಕೂಲಿಗಾಗಿ ಕಾಳು, ಹಾಫ್-ಎ-ಮಿಲಿಯನ್ ಜಾಬ್ಸ್ ಇತ್ಯಾದಿಗಳನ್ನು ನೆನಪಿಸಿಕೊಳ್ಳಬಹುದು. ಪ್ರಗತಿಯ ವೇಗ ಹೆಚ್ಚಿಸಿಕೊಂಡ ಜಿಲ್ಲೆಗಳಲ್ಲೂ ಇಂತಹ ಯೋಜನೆಗಳು ಜನಪ್ರಿಯವಾಗಿದ್ದು ಬ್ಯಾಂಕ ಶಾಖೆಗಳ ಖಾತೆಯಿಂದ ಸಂಭಾವಣೆ ಪಡೆಯುವ ಪದ್ಧತಿಯು ಹೊಸತೇನಲ್ಲ. ಯು.ಪಿ.ಎ. ಸರ್ಕಾರ ತನ್ನ ಮಾತು ಪೂರೈಸಲು ತಂದ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಹೆಗಲು ಕೊಡುವಾಗ ರಾಜ್ಯದಲ್ಲಿ ಸಮ್ಮಿಶ್ರ ಸರ್ಕಾರದ ಹೊಸ ಯುಗ ಕಾಲಿಟ್ಟು ಮುನ್ನಡೆಯುತ್ತಿತ್ತು.

ಹಿಂದೆ ಅಧಿಕಾರಿದಲ್ಲಿದ್ದ ಕಾಂಗ್ರೆಸ್ ಬಹುಮತ ಕಳೆದುಕೊಂಡು ಹಿಂದೆ ಬಿದ್ದಿತು. ಪರಿಸ್ಥಿತಿಗಳ ಮೇಲಾಟದಿಂದಾಗಿ ಜಾತ್ಯಾತೀತ ಜನತಾದಳದೊಂದಿಗೆ ಮೈತ್ರಿ ಆಡಳಿತಕ್ಕೆ ಕೈಸೇರಿಸಿತು. ಎರಡು ವರ್ಷಗಳೊಳಗೆ ಮತ್ತೊಂದು ಸರ್ಕಾರ ಬಂದು ಅದರಲ್ಲಿ ಬಿಜೆಪಿ ದಳಗಳ ಸ್ನೇಹಾಚಾರದಿಂದಾಗಿ ಕಾಂಗ್ರೆಸ್ ಅಧಿಕಾರದಿಂದ ಹೊರಗುಳಿಯಬೇಕಾಯಿತು. ಮತ್ತೆ ಆರು ತಿಂಗಳು ರಾಷ್ಟ್ರಪತಿ ಆಡಳಿತದ ಬಳಿಕ ಮಧ್ಯಾವಧಿ ವಿಧಾನಸಭಾ ಚುನಾವಣೆ ನಡೆದು ಈಗ ಬಿಜೆಪಿ ನೇತೃತ್ವದಲ್ಲಿ ಪಕ್ಷೇತರರ ಬೆಂಬಲ ಪಡೆದುಕೊಂಡು ಅಧಿಕಾರದ ಚುಕ್ಕಾಣಿ ಹಿಡಿದಿದೆ.

ಇವೆಲ್ಲ ಅನಿಶ್ಚಿತತೆಗಳ ನಡುವೆಯೂ ಉದ್ಯೋಗ ಖಾತರಿ ಯೋಜನೆಯ ಕಾರ್ಯಗತ ರಾಜ್ಯದಲ್ಲಿ ಸಾಕಷ್ಟು ಸಾಧನೆಯನ್ನು ತೋರುತ್ತಿದೆ ಎಂಬುದು ಪಕ್ಷಿನೋಟಕ್ಕೆ ಕಂಡುಬರುತ್ತದೆ. ಈ ಸಾಧನೆಗೆ ಪ್ರಮುಖ ಕಾರಣಗಳಲ್ಲೊಂದಾದ ಬ್ಯಾಂಕ್ ಹಾಗೂ ಅಂಚೆ ಕಛೇರಿ ಮುಖಾಂತರ ಹಣ ಸಂದಾಯಮಾಡುವ ವ್ಯವಸ್ಥೆಯನ್ನು ಉಲ್ಲೇಖಿಸಲಾಗುತ್ತಿದೆ.

ಒಟ್ಟಾರೆಯಾಗಿ ನೋಡಿದರೆ ಕರ್ನಾಟಕದಲ್ಲಿ ೧೫,೬೫,೬೭೯ ಕುಟುಂಬಗಳು ಹೋದ ಆರ್ಥಿಕ ವರ್ಷಾಂತ್ಯದೊಳಗೆ ದಾಖಲಾತಿ ಮಾಡಿ ಕಾರ್ಡ್ ಪಡೆದಿರುವುದು. ೧೧,೩೬,೮೪೪ ಬ್ಯಾಂಕ್ ಖಾತೆಗಳು ಹಾಗೂ ೨,೩೧,೯೫೨ ಅಂಚೆ ಕಛೇರಿ ಖಾತೆಗಳು ತೆರೆದಿರುವುದು ಕೂಡ ಲೆಕ್ಕಕ್ಕೆ ಸಿಗುತ್ತದೆ. ಹಿಂದುಳಿದ ಕೊಪ್ಪಳ ಜಿಲ್ಲೆ ಮತ್ತು ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಹಾಗೂ ದಕ್ಷಿಣದ ಚಾಮರಾಜನಗರದಂತಹ ಜಿಲ್ಲೆಗಳಲ್ಲಿ ಅಂಚೆ ಕಛೇರಿಗಳ ಸರಮಾಲೆಯನ್ನು ಬಳಸಿಕೊಳ್ಳುವ ಪ್ರಯತ್ನಗಳು ಪರಿಣಾಮ ಬೀರಿವೆ. ಇದರಿಂದ ಮಧ್ಯವರ್ತಿಗಳ ಕಾಟವಿಲ್ಲದೆ ಹಣ ಫಲಾನುಭವಿಗಳಿಗೆ ತಲುಪುತ್ತದೆ ಎಂಬ ಭರವಸೆ ಮೂಡಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳು ಸರಿಯಾಗಿದೆಂದರ್ಥವಲ್ಲ. ನಿಗದಿ ಪಡಿಸಿದ ದಿನಗೂಲಿ ರೂ. ೭೪ (ಇತ್ತೀಚಿಗೆ ರೂ.೮೨) ತೀರಾ ಕಡಿಮೆ ಎಂಬ ಅಸಮಾಧಾನ ಉದ್ಯೋಗಾಕಾಂಕ್ಷಿಗಳಲ್ಲಿದೆ. ರಾಜ್ಯ ರೈತಸಂಘ, ಪಿ.ಯು.ಸಿ.ಎಲ್., ಜನಾರೋಗ್ಯ ಆಂದೋಲನ ಮುಂತಾದ ಸ್ವಯಂ ಸೇವಾ ಸಂಘಟನೆಗಳು ಈ ಮೊತ್ತದ ಹೆಚ್ಚಳದ ಬಗ್ಗೆ ಆಗ್ರಹಪಡಿಸಿವೆ. ಹಾಗೆಯೇ ರಾಜ್ಯದ ಅನೇಕ ಪಂಚಾಯತಿಗಳಲ್ಲಿ ಸಿಬ್ಬಂದಿಗಳ ಕೊರತೆಯಿದ್ದು ಈ ಯೋಜನೆಯನ್ನು ಸಮರ್ಥವಾಗಿ ಅನುಷ್ಠಾನಕ್ಕೆ ತರಬೇಕಾದರೆ ಖಾಲಿ ಇರುವ ಹುದ್ದೆಗಳನ್ನು ತಕ್ಷಣವೇ ತುಂಬಬೇಕೆಂಬ ಒತ್ತಾಯವು ಸಂಘಟಿತವಾಗಿ ಕೇಳಿಬರುತ್ತಿದೆ.

ಆಳುವ ಪಕ್ಷದ ಪ್ರಬಲ ನೆಲೆ ಕರಾವಳಿ ಜಿಲ್ಲೆಗಳಲ್ಲಿ ಜನರು ಉದ್ಯೋಗ ಕಾರ್ಡ್ ಪಡೆಯಲು ಮುಂದೆ ಬರುತ್ತಿಲ್ಲವೆಂಬ ದೂರನ್ನು ಆ ಪಕ್ಷದ ಜನಪ್ರತಿನಿಧಿಗಳು ಈ ಹಿಂದೆಯೇ ಒಪ್ಪಿಕೊಂಡವರಾಗಿರುವದರಿಂದ ಈಗಿನ ಸಚಿವರುಗಳು ಕೂಲಿಯನ್ನು ೧೦೦ ರೂಪಾಯಿಗಳಿಗಾದರೂ ಏರಿಸಬೇಕೆಂಬ ಪ್ರಯತ್ನದಲ್ಲಿ ತೊಡಗಿದ್ದಾರೆ. ನೆರೆಯ ರಾಜ್ಯವಾದ ಕೇರಳದಲ್ಲಿ ಕೂಲಿಯ ದರವು ದಿನಕ್ಕೆ ೧೨೫ ರೂಪಾಯಿಯೆಂದು ನಿಗದಿಯಾಗಿರುವ ಮಾಹಿತಿಯು

ನಮ್ಮ ರಾಜ್ಯದ ಗ್ರಾಮೀಣವಾಸಿಗಳಿಗೆ ತಿಳಿದುಬಂದಿದೆ. ನೂರಕ್ಕೆ ನೂರು ಸಾಕ್ಷರತೆ ಸಾಧಿಸಿರುವ ಪ್ರದೇಶದಲ್ಲಿ ಗ್ರಾಮ ಪಂಚಾಯತಿ, ಸ್ವಯಂ ಸೇವಾ ಸಂಘಗಳ ಅವಿರತ ಪ್ರಯತ್ನದ ಹೊರತಾಗಿಯೂ ಜನ ಉದ್ಯೋಗ ಕಾರ್ಡ್ ಪಡೆಯಲು ಹಿಂದೇಟು ಹಾಕುತ್ತಿರುವ ಬಗ್ಗೆ ಅಧಿಕಾರಿಗಳು ಸಾರ್ವಜನಿಕ ಸಭೆ-ಸಮಾರಂಭಗಳಲ್ಲಿ ಆತಂಕ ವ್ಯಕ್ತಪಡಿಸುವುದು ಸರ್ವೇ ಸಾಮಾನ್ಯವಾಗಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ೯೦% ರಷ್ಟು ಹಣವನ್ನು ಕೇಂದ್ರವೇ ಭರಿಸುವ ಕಾರಣ ಕೂಲಿ ಮೊತ್ತದ ಏರಿಕೆ ರಾಜ್ಯ ಸರ್ಕಾರದ ಹೊಣೆಗೆ ಬರುತ್ತದೆ. ಯೋಜನೆಯ ಜಿಲ್ಲಾ ವ್ಹಿಜಿಲನ್ಸ್ ಹಾಗೂ ಮೊನಿಟರಿಂಗ್ ಕಮಿಟಿಗಳಲ್ಲಿಯೂ ಚರ್ಚೆ ಗಂಭೀರವಾಗಿ ನಡೆದಿದೆ. ಆದರೆ ದಿನಗೂಲಿ ಮೊತ್ತವನ್ನು ಒಮ್ಮೇಲೆ ೪೦-೫೦ ರೂಪಾಯಿಗಳಷ್ಟು ಮುಂದುವರಿದ ಪ್ರದೇಶಗಳಲ್ಲಿ ಮಾತ್ರ ಏರಿಸಿದರೆ ದಿನಗೂಲಿ ಕಡಿಮೆ ಇರುವ ಜಿಲ್ಲೆಗಳಿಂದ ಹೆಚ್ಚಿನ ಕೂಲಿ ಇರುವ ಜಿಲ್ಲೆಗಳಿಗೆ ಸಾರಾಸಗಟಾಗಿ. ಕಾರ್ಮಿಕರ ವಲಸೆಯಾದರೆ ತೊಂದರೆಯಾಗುತ್ತದೆ ಎಂಬ ಆತಂಕವು ಅಧಿಕಾರಿಗಳದ್ದಾಗಿದೆ.

ಅಭಿವೃದ್ಧಿಯ ವೇಗದಲ್ಲಿ ಹಿಂದುಳಿದಿರುವ ಉತ್ತರ ಕರ್ನಾಟಕದ ಜಿಲ್ಲೆಗಳ ಕಾರ್ಮಿಕರು ಈಗಾಗಲೇ ನೆರೆಯ ಗೋವಾ ಮತ್ತು ಮಹಾರಾಷ್ಟ್ರಗಳಿಗೆ ಗುಳೆ ಹೋಗುವುದು ನಿರಂತರವಾಗಿ ನಡೆದಿದೆ. ಕೂಲಿಕಾರರ ಕೊರತೆಯಿಂದಾಗಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಕೃಷಿ ಚಟುವಟಿಕೆಗಳಿಗೆ ತೀವ್ರ ಸಮಸ್ಯೆ ಸೃಷ್ಟಿಯಾಗಿದೆ.

ಒಟ್ಟಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ಯೋಜನೆಗಳು ಸಮರ್ಪಕವಾಗಿದ್ದರೂ ಅವುಗಳ ಅನುಷ್ಠಾನದಲ್ಲಿ ವಿಳಂಬ ನೀತಿಯ ಧೋರಣೆಯಿಂದಾಗಿ ನಿರೀಕ್ಷಿಸಿದ ಮಟ್ಟದಲ್ಲಿ ಫಲಾನುಭವಿಗಳಿಗೆ ಉದ್ಯೋಗಾವಕಾಶಗಳನ್ನು ಒದಗಿಸಲು ಹಲವಾರು ಸಮಸ್ಯೆಗಳು ಕಾಡುತ್ತಿವೆ.

**೪.೯ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮ ಪಂಚಾಯತಿ ಕ್ಷೇತ್ರದಲ್ಲಿ ಅನುಷ್ಠಾನ**

ಅಭಿವೃದ್ಧಿಯನ್ನು ಸಾಧಿಸುವುದು ಪ್ರತಿಯೊಂದು ದೇಶದ ಪರಮಗುರಿಯಾಗಿದೆ. ಅಭಿವೃದ್ಧಿಯ ಗುರಿಯನ್ನು ಸಾಧಿಸಲು ಹೊಸ ಹೊಸ ಮಾರ್ಗಗಳ ಹುಡುಕಾಟವು ನಿರಂತರವಾಗಿ ನಡೆಯುವ ಪ್ರಕ್ರಿಯೆಯಾಗಿದೆ. ಅಭಿವೃದ್ಧಿ ಸಾಧನೆಯ ಹೊಸ ಮಾರ್ಗಗಳು, ಉದ್ದೇಶಿಸಿದ ಗುರಿಗಳನ್ನು ಸಾಧಿಸಲು ಪೂರಕವಾಗಿದ್ದರೆ ಅಭಿವೃದ್ಧಿ ಯಂತ್ರವು ಸರಾಗವಾಗಿ ಸಾಗುತ್ತದೆ. ಭಾರತದ ಇತಿಹಾಸದಲ್ಲಿ ಸ್ವತಂತ್ರ ಪೂರ್ವದಲ್ಲಿ ಸ್ವಲ್ಪ ಮಟ್ಟಿನ ಪ್ರಯತ್ನಗಳು ನಡೆದಿವೆ. ಸ್ವತಂತ್ರಾ ನಂತರ ಅಭಿವೃದ್ಧಿಯ ಸಾಧನೆಗಾಗಿ ಹಲವಾರು ಪ್ರಯತ್ನಗಳು ನಡೆಯುತ್ತಾ ಬಂದಿರುವುದು ಸ್ವಾಗತಾರ್ಹ. ದೇಶದ ಮೊದಲ ಪ್ರಧಾನಿ ಪಂಡಿತ ಜವಾಹರಲಾಲ ನೆಹರು ಅವರಿಂದ ಆರಂಭವಾದ ಪಂಚವಾರ್ಷಿಕ ಯೋಜನೆಗಳ ಮೂಲಕ ಭಾರತವು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ.

ಅಭಿವೃದ್ಧಿಯೆಂಬುವುದು ಕೇವಲ ದೆಹಲಿ, ಮುಂಬೈ ಕಲ್ಕತ್ತಾ, ಬೆಂಗಳೂರು, ಮದ್ರಾಸ ಮುಂತಾದ ಬೃಹತ್ ನಗರಗಳಿಗೆ ಸೀಮಿತವಾಗಿ ಉಳಿದಿಲ್ಲ. ಈ ದೇಶದ ಜೀವನಾಡಿಯಾದ ಹಳ್ಳಿಗಳು ಅಭಿವೃದ್ಧಿ ಹೊಂದಿದಾಗ ಮಾತ್ರ ದೇಶದ ಅಭಿವೃದ್ಧಿ ಸಾಧಿಸಲಾಗಿದೆಯೆಂದು ತೀರ್ಮಾನಿಸಬಹುದು. ರಾಷ್ಟ್ರಪಿತ ಗಾಂಧೀಜಿಯವರ ಗ್ರಾಮ ಸ್ವರಾಜ್ ಮೂಲ ಕಲ್ಪನೆಯ ತಳಹದಿಯ ಮೇಲೆ ಅಭಿವೃದ್ಧಿಯ ಸೌಧವನ್ನು ಕಟ್ಟಲು ಸಾಕಷ್ಟು ಪ್ರಯತ್ನಗಳು ನಡೆದರು ಸಹ ಅದರಿಂದ ನಿರೀಕ್ಷಿಸಿದ ಮಟ್ಟದಲ್ಲಿ ಸಾಧನೆ ಮಾಡಲಾಗಿಲ್ಲ. ಗ್ರಾಮಾಭಿವೃದ್ಧಿಯ ಪ್ರಮುಖ ಚಿಂತಕರಾದ ಎಸ್. ಕೆ. ಡೇ ಅವರ ಚಿಂತನೆಯ ಫಲವಾಗಿ ಆರಂಭಗೊಂಡ ಸಮುದಾಯ ಅಭಿವೃದ್ಧಿಯ ಕಾರ್ಯಕ್ರಮಗಳಾಗಲಿ, ನಂತರದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಷ್ಠಾನಗೊಳಿಸಿದ ಹತ್ತು - ಹಲವು ಯೋಜನೆಗಳಿಂದಾಗಲಿ ನಮ್ಮ ಗ್ರಾಮೀಣ ಭಾರತದ ನೈಜ ಅಭಿವೃದ್ಧಿಯನ್ನು ಸಾಧಿಸಲು ನಾವು ವಿಫಲರಾಗಿದ್ದೇವೆ. ಗ್ರಾಮೀಣ ಪ್ರದೇಶವು ಹಿಂದುಳಿಯಲು ಪ್ರಮುಖ ಕಾರಣಗಳಾವವು ಎಂದರೆ ಸಾಂಸ್ಥಿಕ ವ್ಯವಸ್ಥೆ. ಈ ದೋಷವನ್ನು ನಿವಾರಿಸುವ ಸಲುವಾಗಿ ಹಲವು ವರ್ಷಗಳ ಚಿಂತನೆ ಮತ್ತು ಪರಿಶ್ರಮದ ಫಲವಾಗಿ ಪಂಚಾಯತ್ ರಾಜ್‌ಗಳ ವ್ಯವಸ್ಥೆಯನ್ನು ಜಾರಿ ತರಲಾಯಿತು. ಕೇಂದ್ರ ಮತ್ತುರಾಜ್ಯ ಸರ್ಕಾರಗಳಿಗಿಂತ ಕೆಳಗಿನ ಹಂತದಲ್ಲಿ ಬಹುಸಂಖ್ಯಾತ ಗ್ರಾಮೀಣ ಜನತೆಗೆ ಹತ್ತಿರವಾದ ಮೂರು ಹಂತಗಳ ಪಂಚಾಯತ್ ರಾಜ್ ವ್ಯವಸ್ಥೆಯನ್ನು ನಾವು ಈಗ ಕಾಣುತ್ತಿದ್ದೇವೆ. ಈ ಪಂಚಾಯತ ರಾಜ್ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ಥರದಲ್ಲಿರುವ ಗ್ರಾಮ ಪಂಚಾಯತಿ ಗ್ರಾಮೀಣ ಜನರ ಆಶೋತ್ತರಗಳಿಗೆ ಸ್ಪಂದಿಸುವ ಮೂಲಕ ಗ್ರಾಮೀಣ ಅಭಿವೃದ್ಧಿಯ ಗತಿ ಹೆಚ್ಚುವುದೆಂಬ ಕನಸು ನನಸಾಗುವ ವಾಸ್ತವಿಕತೆಯನ್ನು ನಾವು ಕಾಣಬಹುದಾಗಿದೆ. ಕರ್ನಾಟಕದಲ್ಲಿ ಅಬ್ದುಲ್ ನಜೀರಸಾಬ್ (ನೀರಸಾಬ) ರವರ ಕನಸಿನ ಮಂಡಲ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ವ್ಯವಸ್ಥೆ ಜಾರಿಯಲ್ಲಿ ಬಂದನಂತರ ಗ್ರಾಮೀಣ ಪ್ರದೇಶಗಳಿಗೆ ರಸ್ತೆ ಕುಡಿಯುವ ನೀರಿನ ಸೌಲಭ್ಯ, ಶಾಲೆಗಳು, ಆಸ್ಪತ್ರೆ ಮುಂತಾದ ಮೂಲಭೂತ ಸೌಲಭ್ಯಗಳನ್ನು ಗ್ರಾಮೀಣ ಜನತೆಗೆ ತಲುಪಿಸುವ ಪ್ರಯತ್ನಗಳು ಭರದಿಂದ ಸಾಗಿವೆ.

ಸ್ವತಂತ್ರ್ಯಾನಂತರ ಗ್ರಾಮೀಣ ಕ್ಷೇತ್ರದ ಸುಧಾರಣೆಗೆ ಹಲವಾರು ಪ್ರಯತ್ನಗಳು ನಡೆದಿವೆ. ಗ್ರಾಮವಾಸಿಗಳಲ್ಲಿ ಶಿಕ್ಷಣದ ಕೊರತೆ, ಬಡತನ, ಋಣಭಾರ ಮುಂತಾದವುಗಳು ಬಡ ಜನತೆಗೆ ನೆಮ್ಮದಿಯಿಂದ ಜೀವನ ಸಾಗಿಸಲು ಸಾಧ್ಯವಾಗುತ್ತಿರಲಿಲ್ಲ. ಈ ಹಂತದಲ್ಲಿ ನೂರು ದಿನಗಳ ಉದ್ಯೋಗ ಭರವಸೆಯನ್ನು ನೀಡಿ ಅವರನ್ನು ಆರ್ಥಿಕವಾಗಿ ಸಬಲರನ್ನಾಗಿಸುವ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಅದುವೇ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ.

ದುಡಿಯುವ ಕೈಗಳಿಗೆ ಕೆಲಸದ ಭರವಸೆಯನ್ನು ನೀಡುವ ಮಹತ್ತರವಾದ ಈ ಯೋಜನೆಯು ಗ್ರಾಮೀಣ ಜನತೆಯ ಆಶಾಕಿರಣವಾಗಿ ಹೊರಹೊಮ್ಮಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಪ್ರಥಮವಾಗಿ ೨೦೦೫-೦೬ ರಲ್ಲಿ ದೇಶದ ಆಯ್ದ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಯಿತು. ಎರಡನೇ ಹಂತದಲ್ಲಿ ೨೦೦೬-೦೭ ರಲ್ಲಿ ಈ ಯೋಜನೆಯನ್ನು ૩૩೦ ಜಿಲ್ಲೆಗಳಿಗೆ ವಿಸ್ತರಿಸಲಾಯಿತು. ૩ ನೇ ಹಂತದಲ್ಲಿ ಸಮಗ್ರ ಭಾರತದ ಎಲ್ಲ ಜಿಲ್ಲೆಗಳಲ್ಲಿ ೨೦೦೮-೦೯ ರಲ್ಲಿ ಅನುಷ್ಠಾನಗೊಳಿಸಲಾಗಿದೆ.

ಕರ್ನಾಟಕದಲ್ಲಿ ೨೦೦೫-೦೬ ರಲ್ಲಿ ೫ ಜಿಲ್ಲೆಗಳಲ್ಲಿ ಪ್ರಾಯೋಗಿಕವಾಗಿ ಜಾರಿಗೊಳಿಸಲಾಯಿತು. ೨೦೦೬-೦೭ ರಲ್ಲಿ ಮತ್ತೆ ೬ ಜಿಲ್ಲೆಗಳಲ್ಲಿ ಜಾರಿ ಮಾಡಲಾಯಿತು. ೨೦೦೮ ಎಪ್ರಿಲ್‌ನಿಂದ ರಾಜ್ಯದ ಉಳಿದ ೧೮ ಜಿಲ್ಲೆಗಳಲ್ಲಿ ಅನುಷ್ಠಾನವಾಗಿದೆ.

ಜನರ ಸಹಭಾಗಿತ್ವದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸುವುದು ಕಡ್ಡಾಯವಾಗಿರುವದರಿಂದ ಬಾಗಲಕೋಟ ಜಿಲ್ಲೆಯ ೬ ತಾಲ್ಲೂಕುಗಳಲ್ಲಿ ಮತ್ತು ಮುಧೋಳ ತಾಲೂಕಿನ ೨೫ ಗ್ರಾಮ ಪಂಚಾಯತ್‌ಗಳಲ್ಲಿ ಪ್ರಥಮವಾಗಿ ಜನಯೋಜನೆಯ ಮೂಲಕ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟವನ್ನು .ತಯಾರಿಸಿ ಅನುಷ್ಠಾನಗೊಳಿಸಲಾಗಿದೆ. ಬೆಳಗಲಿ ಗ್ರಾಮ ಪಂಚಾಯತಿಯಲ್ಲಿಯೂ ಈ ಯೋಜನೆ ಅನುಷ್ಠಾನದಲ್ಲಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ವಯ ಬೆಳಗಲಿ ಗ್ರಾಮ ಪಂಚಾಯತಿಯಲ್ಲಿ ಪ್ರಸಕ್ತ ಆರ್ಥಿಕ ವರ್ಷದ ೬ ತಿಂಗಳುಗಳಲ್ಲಿ ೧೬ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಗ್ರಾಮದ ಬಡವರು ಕೆಲಸಕ್ಕಾಗಿ ಅರ್ಜಿ ಸಲ್ಲಿಸಿದಾಗ ಅವರಿಗೆ ವರ್ಷದಲ್ಲಿ ೧೦೦ ದಿನಗಳ ಕೆಲಸವನ್ನು ಕೊಡುವ ಜವಾಬ್ದಾರಿಯು ಗ್ರಾಮ ಪಂಚಾಯತದ್ದಾಗಿರುತ್ತದೆ.

ಬೆಳಗಲಿ ಗ್ರಾಮ ಪಂಚಾಯತಿಯಲ್ಲಿ ಈ ಯೋಜನೆಯ ಅನ್ವಯ ೧೬ ವಿವಿಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಹಾಗೂ ಈ ಯೋಜನೆಗಳಿಗೆ ಮಾಡಿದ ಒಟ್ಟು ವೆಚ್ಚದ ವಿವರವನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ-೪.೧**

**ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕರ್ನಾಟಕ ೨೦೦೮-೦೯ ನೇ ಸಾಲಿನ ಕ್ರಿಯಾ ಯೋಜನೆ**

ಗ್ರಾಮ ಪಂಚಾಯತ ಬೆಳಗಲಿ (ಲಕ್ಷ ರೂ.ಗಳಲ್ಲಿ)

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೦೧. | ೧೫೦೧೦೬೦೦೪೦೦೧೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೨. | ೧೫೦೧೦೬೦೦೪೦೦೨೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೩. | ೧೫೦೧೦೬೦೦೪೦೦೩೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೪. | ೧೫೦೧೦೬೦೦೪೦೦೪೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೫. | ೧೫೦೧೦೬೦೦೪೦೦೫೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೬. | ೧೫೦೧೦೬೦೦೪೦೦೬೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೭. | ೧೫೦೧೦೬೦೦೪೦೦೭೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೮. | ೧೫೦೧೦೬೦೦೪೦೦೮೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೦೯. | ೧೫೦೧೦೬೦೦೪೦೦೯೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೦. | ೧೫೦೧೦೬೦೦೪೦೧೦೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೧. | ೧೫೦೧೦೬೦೦೪೦೧೧೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೨. | ೧೫೦೧೦೬೦೦೪೦೧೨೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೩.. | ೧೫೦೧೦೬೦೦೪೦೧೩೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೧೪. | ೧೫೦೧೦೬೦೦೪೦೧೪೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೫. | ೧೫೦೧೦೬೦೦೪೦೧೫೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೬. | ೧೫೦೧೦೬೦೦೪೦೧೬೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೭. | ೧೫೦೧೦೬೦೦೪೦೧೭೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೮. | ೧೫೦೧೦೬೦೦೪೦೧೮೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೧೯. | ೧೫೦೧೦೬೦೦೪೦೧೯೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೨೦. | ೧೫೦೧೦೬೦೦೪೦೨೦೦೧೦೫೦೮ | ಕೃಷಿ ಹೊಂಡ ನಿರ್ಮಾಣ | ೦.೨೯ | ೦.೧೭೪ | ೦.೧೧೬ | ೨೩೫ |
| ೨೧. | ೧೫೦೧೦೬೦೦೪೦೨೧೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೨. | ೧೫೦೧೦೬೦೦೪೦೨೨೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೩. | ೧೫೦೧೦೬೦೦೪೦೨೩೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೪. | ೧೫೦೧೦೬೦೦೪೦೨೪೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೫. | ೧೫೦೧೦೬೦೦೪೦೨೫೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೬. | ೧೫೦೧೦೬೦೦೪೦೨೬೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೭. | ೧೫೦೧೦೬೦೦೪೦೨೭೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೮. | ೧೫೦೧೦೬೦೦೪೦೨೮೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೨೯. | ೧೫೦೧೦೬೦೦೪೦೨೯೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |
| ೩೦. | ೧೫೦೧೦೬೦೦೪೦೩೦೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ | ೨.೦೦ | ೧.೨ | ೦.೮೦ | ೧೬೨೨ |

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೩೧. | ೧೫೦೧೧೦೬೦೦೪೦೩೧೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೨. | ೧೫೦೧೧೦೬೦೦೪೦೩೨೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೩. | ೧೫೦೧೧೦೬೦೦೪೦೩೩೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೪. | ೧೫೦೧೧೦೬೦೦೪೦೩೪೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೫. | ೧೫೦೧೧೦೬೦೦೪೦೩೫೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೬. | ೧೫೦೧೧೦೬೦೦೪೦೩೬೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೭. | ೧೫೦೧೧೦೬೦೦೪೦೩೭೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೮. | ೧೫೦೧೧೦೬೦೦೪೦೩೮೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೩೯. | ೧೫೦೧೧೦೬೦೦೪೦೩೯೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೦. | ೧೫೦೧೧೦೬೦೦೪೦೪೦೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೧. | ೧೫೦೧೧೦೬೦೦೪೦೪೧೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೨. | ೧೫೦೧೧೦೬೦೦೪೦೪೨೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೩. | ೧೫೦೧೧೦೬೦೦೪೦೪೩೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೪. | ೧೫೦೧೧೦೬೦೦೪೦೪೪೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೫. | ೧೫೦೧೧೦೬೦೦೪೦೪೫೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೬. | ೧೫೦೧೧೦೬೦೦೪೦೪೬೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೭. | ೧೫೦೧೧೦೬೦೦೪೦೪೭೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೪೮. | ೧೫೦೧೦೬೦೦೪೦೪೮೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೪೯. | ೧೫೦೧೦೬೦೦೪೦೪೯೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೦. | ೧೫೦೧೦೬೦೦೪೦೫೦೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೧. | ೧೫೦೧೦೬೦೦೪೦೫೧೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೨. | ೧೫೦೧೦೬೦೦೪೦೫೨೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೩. | ೧೫೦೧೦೬೦೦೪೦೫೩೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೪. | ೧೫೦೧೦೬೦೦೪೦೫೪೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೫. | ೧೫೦೧೦೬೦೦೪೦೫೫೦೧೦೫೦೮ | ರೈತರ ಹೊಲಗಳಲ್ಲಿ ಭೂಸಮತಳ ಮತ್ತು ಒಡ್ಡು ನಿರ್ಮಾಣ | ೦.೨೬ | ೦.೧೫೬ | ೦.೧೦೪ | ೨೧೧ |
| ೫೬. | ೧೫೦೧೦೬೦೦೪೦೫೬೦೧೦೫೦೮ | ಸದಾಶಿವಪ್ಪನ ಗುಡಿ ಹತ್ತಿರ ಕೆರೆ ಹೂಳೆತ್ತುವುದು ೨ ಎಕರೆ | ೩.೦೦ | ೧.೮ | ೧.೨ | ೨೪೩೨ |
| ೫೭. | ೧೫೦೧೦೬೦೦೪೦೫೭೦೧೦೫೦೮ | ಸರ್ವೇನು.೨೩೭ರಲ್ಲಿಲೇವಿಂಗ್ ೫೨ಎಕರೆಮತ್ತುಬದುನಿರ್ಮಾಣ | ೩.೮ | ೨.೨೮ | ೧.೫೨ | ೩೦೮೧ |
| ೫೮. | ೧೫೦೧೦೬೦೦೪೦೫೮೦೧೦೫೦೮ | ಚೆಕ್‌ಡ್ಯಾಂ ೧ ನಿರ್ಮಾಣ | ೩.೫ | ೨.೧ | ೧.೪ | ೨೮೩೮ |
| ೫೯. | ೧೫೦೧೦೬೦೦೪೦೫೯೦೧೦೫೦೮ | ಮನಿಳಕೇರಿಯವರ ಮನೆಯ ಹತ್ತಿರ ಚೆಕ್‌ಡ್ಯಾಂ ಕೆರೆನಿರ್ಮಾಣ | ೫.೦೦ | ೩.೦ | ೨.೦ | ೪೦೫೪ |
| ೬೦. | ೧೫೦೧೦೬೦೦೪೦೬೦೦೧೦೫೦೮ | ದಪ್ಪಗಿಯವರ ತೋಟದಹತ್ತಿರ ಚೆಕ್‌ಡ್ಯಾಂ ನಿರ್ಮಾಣ | ೩.೫೦ | ೨.೧ | ೧.೪ | ೨೮೩೮ |
| ೬೧. | ೧೫೦೧೦೬೦೦೪೦೬೧೦೧೦೫೦೮ | ಚೆಕ್‌ಡ್ಯಾಂ ನಿರ್ಮಾಣ ಮಹಾಲಿಂಗೇಶ್ವರ ದೇವಸ್ಥಾನ ಹತ್ತಿರ | ೩.೫೦ | ೨.೧ | ೧.೪ | ೨೮೩೮ |
| ೬೨. | ೧೫೦೧೦೬೦೦೪೦೬೨೦೧೦೫೦೮ | ಎಲ್.ಪಿ.ಎಸ್.ಕೊರ್ಮುತೋಟದಶಾಲೆಆಟದಮೈದಾನಅಭಿವೃದ್ಧಿ | ೧.೫೦ | ೦.೯ | ೦.೬ | ೧೨೧೬ |
| ೬೩. | ೧೫೦೧೦೬೦೦೪೦೬೩೦೧೦೫೦೮ | ತೋಟದನಂ.೧ ಶಾಲೆ ಆಟದ ಮೈದಾನ ಸಮತಟ್ಟು ಮಾಡುವುದು | ೧.೫೦ | ೦.೯ | ೦.೬ | ೧೨೧೬ |
| ೬೪. | ೧೫೦೧೦೬೦೦೪೦೬೪೦೧೦೫೦೮ | ಸದಾಶಿವಪ್ಪನ ಗುಡಿ ಹತ್ತಿರ ಕೆರೆ ಹೂಳೆತ್ತುವುದು ೨ ಎಕರೆ | ೩.೦ | ೧.೮ | ೧.೨ | ೨೪೩೨ |

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೬೫. | ೧೫೦೧೦೬೦೦೪೦೬೫೦೧೦೫೦೮ | ಪೂಜಾರಿ ಭೂಮಿ ಪತ್ತಿರವಿರುವ ಕೆರೆ ಹೂಳೆತ್ತುವುದು ಮತ್ತು ಕಲ್ಲು ಫಿಟಿಂಗ್ | ೩.೩೦ | ೧.೯೮ | ೧.೩೨ | ೨೬೭೬ |
| ೬೬. | ೧೫೦೧೦೬೦೦೪೦೬೬೦೧೦೫೦೮ | ಮಳಿನಿಕೇರಿ ಮನೆ ಹತ್ತಿರ ಚಿಕ್ಕ ಡ್ಯಾಂ ಕೆರೆ ನಿರ್ಮಾಣ೨೦ಗುಂಟೆ | ೫.೦೦ | ೩.೦೦ | ೨.೦೦ | ೪೦೫೪ |
| ೬೭. | ೧೫೦೧೦೬೦೦೪೦೬೭೦೧೦೫೦೮ | ಪಾಟೀಲ ಅವರ ತೋಟದಪಕ್ಕದಲ್ಲಿ ಚೆಕ್ ಡ್ಯಾಂ ಹೂಳೆತ್ತುವುದು | ೩.೨೨೪ | ೧.೯೩೪ | ೧.೨೯ | ೨೬೧೪ |
| ೬೮. | ೧೫೦೧೦೬೦೦೪೦೬೮೦೧೦೫೦೮ | ಭರಮನಿಯ ತೋಟದ ಕೆರೆ ಹೂಳೆತ್ತುವುದು | ೨.೫೦ | ೧.೫೦ | ೧.೦೦ | ೨೦೨೭ |
| ೬೯. | ೧೫೦೧೦೬೦೦೪೦೬೯೦೧೦೫೦೮ | ಹೊಸ ಕೆರೆ ನಿರ್ಮಾಣ | ೨೦ | ೧೨ | ೮ | ೧೬೨೧೬ |
| ೭೦. | ೧೫೦೧೦೬೦೦೪೦೭೦೦೧೦೫೦೮ | ಹಳೆ ಕೆರೆ ಹೂಳೆತ್ತುವುದು ಜೋಗಪ್ಪನ ತೋಟದಹತ್ತಿರ | ೨ | ೧.೨ | ೦.೮ | ೧೬೨೨ |
| ೭೧. | ೧೫೦೧೦೬೦೦೪೦೭೧೦೧೦೫೦೮ | ಹೊಸಕೆರೆ ಮಳಲಿ ಕೆನಾಲ ಹತ್ತಿರ ನಿರ್ಮಾಣ೨ಎಕರೆ | ೧೯.೩೨ | ೧೧.೭೧೨ | ೭.೮೦೮ | ೧೫೮೨೭ |
| ೭೨. | ೧೫೦೧೦೬೦೦೪೦೭೨೦೧೦೫೦೮ | ಸ.ನಂ.೪೨೭ ರಲ್ಲಿ ಹೊಸ ಕೆರೆ ನಿರ್ಮಾಣ ೧.೬ ಎಕರೆ | ೯.೫೦ | ೫.೭ | ೩.೮ | ೭೭೦೩ |
| ೭೩. | ೧೫೦೧೦೬೦೦೪೦೭೩೦೧೦೫೦೮ | ನಾವಲಗಿ ರಸ್ತೆಯಿಂದ ಹಾರೂನ ತೋಟದವರೆಗೆ ರಸ್ತೆ ಅಭಿವೃದ್ಧಿ | ೧.೨೦ | ೦.೭೧೭೬ | ೦.೪೭೮೪ | ೯೭೦ |
| ೭೪. | ೧೫೦೧೦೬೦೦೪೦೭೪೦೧೦೫೦೮ | ಹಟ್ಟಿನವರ ತೋಟದಿಂದ ಚಿಮ್ಮಡದ ಕೆನಾಲದವರೆಗೆ ರಸ್ತೆಮೆಟ್ಲಿಂಗ್ | ೧.೬೦ | ೦.೯೬ | ೦.೬೪ | ೧೨೯೭ |
| ೭೫. | ೧೫೦೧೦೬೦೦೪೦೭೫೦೧೦೫೦೮ | ಕೋಡಿಹಾಳ ರಸ್ತೆಯಿಂದ ನೇದುರ ತೋಟದ ಕೆನಾಲದವರೆಗೆ ಮೆಟ್ಲಿಂಗ್ | ೨.೩೦ | ೧.೩೮ | ೦.೯೨ | ೧೮೬೫ |
| ೭೬. | ೧೫೦೧೦೬೦೦೪೦೭೬೦೧೦೫೦೮ | ಸೈದಾಪೂರ ತೋಟದಿಂದ ಹಳ್ಳದ ತೋಟದವರೆಗೆ ಮೆಟ್ಲಿಂಗ್ | ೧.೨೦ | ೦.೭೨ | ೦.೪೮ | ೯೭೩ |
| ೭೭. | ೧೫೦೧೦೬೦೦೪೦೭೭೦೧೦೫೦೮ | ಮಹಾಲಿಂಗಪುರ-ಬೆಳಗಲಿ ಮುಖ್ಯರಸ್ತೆಯಿಂದ ಶಿರೋಳ ತೋಟದವರೆಗೆ ರಸ್ತೆ ಅಭಿವೃದ್ಧಿ | ೧.೨೦ | ೦.೭೨ | ೦.೪೮ | ೯೭೩ |
| ೭೮. | ೧೫೦೧೦೬೦೦೪೦೭೮೦೧೦೫೦೮ | ಎ.ಪಿ.ಎಂ.ಸಿ.ಯಿಂದ ಹ್ಯಾಗಾಡೆ ತೋಟದವರೆಗೆ ರಸ್ತೆ ಅಭಿವೃದ್ಧಿ | ೧ | ೦.೬ | ೦.೪ | ೮೧೧ |
| ೭೯. | ೧೫೦೧೦೬೦೦೪೦೭೯೦೧೦೫೦೮ | ರಸ್ತೆ ಅಭಿವೃದ್ಧಿ | ೨.೨೦ | ೧.೩೨ | ೦.೮೮ | ೧೭೮೪ |
| ೮೦. | ೧೫೦೧೦೬೦೦೪೦೮೦೦೧೦೫೦೮ | ರಸ್ತೆ ಅಭಿವೃದ್ಧಿ | ೧ | ೦.೬ | ೦.೪ | ೮೧೧ |
| ೮೧. | ೧೫೦೧೦೬೦೦೪೦೮೧೦೧೦೫೦೮ | ರಸ್ತೆ ಅಭಿವೃದ್ಧಿ | ೧ | ೦.೬ | ೦.೪ | ೮೧೧ |

| ಅ.ಸಂ. | ಕಾಮಗಾರಿ ಸಂಕೇತ | ಕಾಮಗಾರಿ ಹೆಸರು | ಅಂದಾಜು ಮೊತ್ತ | ಕೂಲಿ ವೆಚ್ಚ | ಸಾಮಗ್ರಿ ವೆಚ್ಚ | ಮಾನವ ದಿನಗಳು |
|---|---|---|---|---|---|---|
| ೮೨. | ೧೫೦೧೦೬೦೦೪೦೮೨೦೧೦೫೦೮ | ರಸ್ತೆ ಅಭಿವೃದ್ಧಿ | ೪.೨೦ | ೨.೫೨ | ೧.೬೮ | ೩೪೦೫ |
| ೮೩. | ೧೫೦೧೦೬೦೦೪೦೮೩೦೧೦೫೦೮ | ಹೊಸ ರಸ್ತೆ ನಿರ್ಮಾಣ | ೪.೬೦ | ೨.೭೬ | ೧.೮೪ | ೩೭೩೦ |
| ೮೪. | ೧೫೦೧೦೬೦೦೪೦೮೪೦೧೦೫೦೮ | ರಸ್ತೆ ಅಭಿವೃದ್ಧಿ ೨ ಕಿ.ಮೀ. | ೦ | ೦ | ೦ | ೦ |
| ೮೫. | ೧೫೦೧೦೬೦೦೪೦೮೫೦೧೦೫೦೮ | | ೩.೪೦ | ೨.೦೪ | ೧.೩೬ | ೨೭೫೭ |
| ೮೬. | ೧೫೦೧೦೬೦೦೪೦೮೬೦೧೦೫೦೮ | ರಸ್ತೆ ಅಭಿವೃದ್ಧಿ ೧ ಕಿ.ಮೀ. | ೨.೨೦ | ೧.೩೨ | ೦.೮೮ | ೧೭೮೪ |
| ೮೭. | ೧೫೦೧೦೬೦೦೪೦೮೭೦೧೦೫೦೮ | ರಸ್ತೆ ಅಭಿವೃದ್ಧಿ ೫೦೦ ಮೀಟರ್ | ೧.೧೦ | ೦.೬೬ | ೦.೪೪ | ೮೯೨ |
| ೮೮. | ೧೫೦೧೦೬೦೦೪೦೮೮೦೧೦೫೦೮ | ರಸ್ತೆ ಅಭಿವೃದ್ಧಿ ೫೦೦ ಮೀಟರ್ | ೧.೧೦ | ೦.೬೬ | ೦.೪೪ | ೮೯೨ |
| ೮೯. | ೧೫೦೧೦೬೦೦೪೦೮೯೦೧೦೫೦೮ | ಹೊಸ ರಸ್ತೆ ನಿರ್ಮಾಣ ೨ ಕಿ.ಮೀ. | ೩.೫೬ | ೨.೧೩೬ | ೧.೪೨೪ | ೨೮೮೬ |
| ೯೦. | ೧೫೦೧೦೬೦೦೪೦೯೦೦೧೦೫೦೮ | ಅರಣ್ಯ ಬೆಳೆಸುವುದು | ೧೮.೨೬ | ೧೦.೯೫೬ | ೭.೩೦೪ | ೧೪೮೦೫ |
| ೯೧. | ೧೫೦೧೦೬೦೦೪೦೯೧೦೧೦೫೦೮ | ಅರಣ್ಯೀಕರಣ ೧೦೦ ಮೀಟರ್ | ೧೩.೮೬ | ೮.೩೧೬ | ೫.೫೪೪ | ೧೧೨೩೮ |
| | | **ಒಟ್ಟು** | **೧೯೦.೬೨** | **೧೧೪.೩೭೨** | **೭೬.೨೪೮** | **೧೫೪೫೫೭** |

**ಕೋಷ್ಟಕ ೪.೧ ರ ವಿಶ್ಲೇಷಣೆ :**

ಬೆಳಗಲಿ ಗ್ರಾಮ ಪಂಚಾಯತಿ ಕ್ಷೇತ್ರದಲ್ಲಿ ೨೦೦೮-೦೯ ನೇ ಸಾಲಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳ ವಿಶ್ಲೇಷಣೆ ಈ ಕೆಳಗಿನಂತಿದೆ.

೧. ಈ ಕ್ರಿಯಾ ಯೋಜನೆಯ ಮೊದಲನೆಯ ಕಾಮಗಾರಿ ಸಂಕೇತ ೧೫೦೧೦೬೦೦೪೦೦೧೦೧೦೫೦೮ ದಿಂದ ೧೫೦೧೦೬೦೦೪೦೨೦೦೧೦೫೦೮ ವರೆಗಿನ ೨೦ ಕೃಷಿ ಹೊಂಡ ನಿರ್ಮಾಣದ ಕಾಮಗಾರಿಗಳನ್ನು ಅಂದಾಜು ವೆಚ್ಚ ೫.೮ ಲಕ್ಷದಲ್ಲಿ ಕೈಗೆತ್ತಿಕೊಳ್ಳಲಾಗಿತ್ತು. ಅದರಲ್ಲಿ ಕೂಲಿಗಾಗಿ ೩.೪೮ ಲಕ್ಷ ರೂ.ಗಳು ಮತ್ತು ಸಾಮಗ್ರಿಗಳಿಗಾಗಿ ೨.೩೨ ಲಕ್ಷ ರೂ.ಗಳ ವೆಚ್ಚದಲ್ಲಿ ೪೨೦೦ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಯಿತು.

. ೨. ಈ ಕ್ರಿಯಾ ಯೋಜನೆಯ ಎರಡನೆಯ ಕಾಮಗಾರಿಯಾದ ೧೦ ಚೆಕ್‌ಡ್ಯಾಂಗಳ ನಿರ್ಮಾಣವನ್ನು ಕಾಮಗಾರಿಯ ಸಂಕೇತ ೧೫೦೧೦೬೦೦೪೦೨೦೦೧೦೫೦೮ ದಿಂದ ೧೫೦೧೦೬೦೦೪೦೩೦೦೧೦೫೦೮ ವರೆಗೆ ಅಂದಾಜು ೩೦ ಲಕ್ಷ ಮೊತ್ತದಿಂದ ಕೈಗೆತ್ತಿಕೊಳ್ಳಲಾಗಿತ್ತು. ಅದರಲ್ಲಿ ೧೨ ಲಕ್ಷರೂ.ಗಳ ಕೂಲಿ ಮತ್ತು ೮ ಲಕ್ಷ ರೂ.ಗಳ ಸಾಮಗ್ರಿಗಳ ವೆಚ್ಚದಲ್ಲಿ ೧೦೨೨೦ ಮಾನವ ದಿನಗಳನ್ನು ಬಳಸಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆ.

೩. ಈ ಕ್ರಿಯಾ ಯೋಜನೆಯ ಮೂರನೆಯ ಕಾಮಗಾರಿಯಾದ ೨೫ ಸಣ್ಣ ರೈತರ ಹೊಲಗಳಲ್ಲಿ ಭೂ ಸಮತಳ ಮಾಡುವುದು ಮತ್ತು ಒಡ್ಡು ನಿರ್ಮಾಣ ಮಾಡುವ ಕಾಮಗಾರಿಯ ಸಂಕೇತ ೧೫೦೧೦೬೦೦೪೦೩೧೦೧೦೫೦೮ ದಿಂದ ೧೫೦೧೦೬೦೦೪೦೫೫೦೧೦೫೦೮ ರವರೆಗೆ ೬.೫ ಲಕ್ಷ ಅಂದಾಜು ಮೊತ್ತದಿಂದ ಕೈಗೊಳ್ಳಲಾಯಿತು. ಇದರಲ್ಲಿ ೩.೯ ಲಕ್ಷ ಕೂಲಿಗಾಗಿ ಮತ್ತು ೨.೬ ಲಕ್ಷ ರೂ.ಗಳನ್ನು ಸಾಮಗ್ರಿಗಳ ವೆಚ್ಚಕ್ಕಾಗಿ ಬಳಸಲಾಯಿತು. ೫೨೭೫ ಮಾನವ ದಿನಗಳಿಂದ ಕಾಮಗಾರಿಯನ್ನು ಪೂರ್ಣಗೊಳಿಸಲಾಯಿತು.

೪. ಈ ಕ್ರಿಯಾ ಯೋಜನೆಯಡಿಯಲ್ಲಿ ೪ ನೇ ಕಾಮಗಾರಿಯಾದ ಕೆರೆ ಹೂಳೆತ್ತುವುದು ಮತ್ತು ಚೆಕ್‌ಡ್ಯಾಂ ನಿರ್ಮಾಣದ ಕಾಮಗಾರಿಯ ಸಂಕೇತ ೧೫೦೧೦೪೦೦೮೦೫೬೦೩೧೦೦೮ ರಿಂದ ೧೫೦೧೦೪೦೦೮೮೦೫೧೦೦೮ ವರೆಗೆ ೧೦.೩ ಲಕ್ಷ ರೂ.ಗಳ ಅಂದಾಜು ಮೊತ್ತವನ್ನು ನಿರ್ಧರಿಸಲಾಯಿತು. ೬.೧೮ ಲಕ್ಷ ರೂ. ಕೂಲಿಗಾಗಿ ಮತ್ತು ೪.೧೨ ಲಕ್ಷ ರೂ. ಸಾಮಗ್ರಿಗಾಗಿ ವೆಚ್ಚಮಾಡಿ ೮೩೫೧ ಮಾನವ ದಿನಗಳಿಂದ ಕಾಮಗಾರಿಯನ್ನು ಪೂರೈಸಲಾಯಿತು.

೫. ಐದನೆಯ ಕಾಮಗಾರಿಯಾದ ಚೆಕ್‌ಡ್ಯಾಂಗಳ ನಿರ್ಮಾಣವನ್ನು ಸುಮಾರು ೧೦ ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ನಿರ್ಧರಿಸಿ, ಕೂಲಿಗಾಗಿ ೬.೨ ಲಕ್ಷರೂ. ಮತ್ತು

ಸಾಮಗ್ರಿಗಳಿಗಾಗಿ ೪.೭ ಲಕ್ಷ ರೂ.ಗಳನ್ನು ವೆಚ್ಚ ಮಾಡಿ ೯೭೩೦ ಮಾನವ ದಿನಗಳಿಂದ ಪೂರ್ಣಗೊಳಿಸಲಾಯಿತು.

೬. ಆರನೆಯ ಕಾಮಗಾರಿಯಾದ ಎರಡು ಶಾಲೆಗಳ ಆಟದ ಮೈದಾನ ಅಭಿವೃದ್ಧಿಯನ್ನು ೩ ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಯಿತು. ಕೂಲಿಗಾಗಿ ೧.೮ ಲಕ್ಷ ರೂ.ಗಳನ್ನು, ೧.೨ ಲಕ್ಷ ರೂ.ಗಳನ್ನು ಸಾಮಗ್ರಿಗಳಿಗಾಗಿ ವೆಚ್ಚಮಾಡಿ ೨೪೩೨ ಮಾನವ ದಿನಗಳ ನೆರವಿನಿಂದ ಕಾಮಗಾರಿಯನ್ನು ಪೂರ್ಣಗೊಳಿಸಲಾಯಿತು.

೭. ಏಳನೆಯ ಕಾಮಗಾರಿಯಾದ ಕೆರೆ ನಿರ್ಮಾಣವನ್ನು ೯.೩ ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ನಿರ್ಧರಿಸಿ ೫.೭ ಲಕ್ಷ ರೂ.ಗಳನ್ನು ಕೂಲಿಗಾಗಿ ಮತ್ತು ೩.೮ ಲಕ್ಷ ರೂ.ಗಳನ್ನು ಸಾಮಗ್ರಿಗಳಿಗಾಗಿ ವೆಚ್ಚಮಾಡಿ ೭೭೦೦ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಯಿತು.

೮. ಎಂಟನೆಯ ಕಾಮಗಾರಿಯಾದ ಎರಡು ಹೊಸ ಕೆರೆಗಳ ನಿರ್ಮಾಣ ೩೯.೫೨ ಲಕ್ಷ ರೂ.ಗಳ ಅಂದಾಜು ಮೊತ್ತವೆಂದು ನಿರ್ಧರಿಸಿ ಇದರಲ್ಲಿ ಕೂಲಿಗಾಗಿ ೨೩.೭೧ ಲಕ್ಷ ರೂ.ಗಳನ್ನು ಸಾಮಗ್ರಿಗಳಿಗಾಗಿ ೧೫.೮೦ ಲಕ್ಷ ರೂ.ಗಳನ್ನು ಖರ್ಚುಮಾಡಿ ೩೧೭೭೦ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಯಿತು.

೯. ಒಂಬತ್ತನೆಯ ಕಾಮಗಾರಿಯಾದ ಹದಿನಾರು ರಸ್ತೆ ನಿರ್ಮಾಣ ಮತ್ತು ಅಭಿವೃದ್ಧಿಗಾಗಿ ಅಂದಾಜು ೩೧.೬೬ ಲಕ್ಷ ರೂಪಾಯಿಯೆಂದು ನಿರ್ಧರಿಸಿ, ಕೂಲಿಗಾಗಿ ೧೯.೨ ಲಕ್ಷ ರೂ.ಗಳನ್ನು ಮತ್ತು ೧೩.೧೪ ಲಕ್ಷ ರೂ.ಗಳನ್ನು ಸಾಮಗ್ರಿಗಳಿಗಾಗಿ ವೆಚ್ಚಮಾಡಿ, ೨೬೫೪೧ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಗಿದೆ.

೧೦. ಅರಣ್ಯ ಬೆಳೆಸುವ ಕಾಮಗಾರಿಯನ್ನು ೧೯.೨೭ ಲಕ್ಷ ರೂಪಾಯಿಗಳ ಕೂಲಿ ಮತ್ತು ೧೨.೮೫ ಲಕ್ಷ ರೂಪಾಯಿಗಳ ಸಾಮಗ್ರಿಗಾಗಿ ಒಟ್ಟು ೩೨.೧೨ ಲಕ್ಷ ರೂ.ಗಳನ್ನು ಖರ್ಚು ಮಾಡಿ ೧೪೮೦೫ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಗಿದೆ.

೧೧. ಇತರೇ ಕಾಮಗಾರಿಗಳನ್ನು ಅಂದಾಜು ೨೨.೨೨ ಲಕ್ಷ ರೂಪಾಯಿಗಳಲ್ಲಿ ಕೈಗೊಂಡು, ಕೂಲಿಗಾಗಿ ೧೨.೪೧ ಲಕ್ಷ ರೂಪಾಯಿಗಳನ್ನು ಹಾಗೂ ಸಾಮಗ್ರಿಗಳಿಗಾಗಿ ೧೨.೮೩ ಲಕ್ಷ ರೂ.ಗಳನ್ನು ವೆಚ್ಚಮಾಡಿ ೧೪೪೪೦ ಮಾನವ ದಿನಗಳ ಬಳಕೆಯಿಂದ ಪೂರ್ಣಗೊಳಿಸಲಾಗಿದೆ.

ಒಟ್ಟಿನಲ್ಲಿ ೧೬ ಕಾಮಗಾರಿಗಳನ್ನು ೧೯೦.೬೨ ಲಕ್ಷ ರೂ.ಗಳ ವೆಚ್ಚದಲ್ಲಿ ಕೈಗೊಳ್ಳಲಾಗಿದೆ. ಇದಕ್ಕಾಗಿ ೧೫೪೫೫೭ ಮಾನವ ದಿನಗಳ ಬಳಕೆಯಾಗಿದೆ. ಇದಕ್ಕಾಗಿ ೧೧೪.೩೭ ಲಕ್ಷ ರೂ.ಗಳ ಕೂಲಿ ವೆಚ್ಚವನ್ನು ಮತ್ತು ೭೬.೨೫ ಲಕ್ಷ ರೂ.ಗಳ ಸಾಮಗ್ರಿಗಳಿಗಾಗಿ ವೆಚ್ಚವನ್ನು ಮಾಡಲಾಗಿದೆ.

# ಅಧ್ಯಾಯ ಐದು

# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮದಲ್ಲಿ ಅನುಷ್ಠಾನಗೊಳಿಸಲಾದ ಯೋಜನೆಯ ದತ್ತಾಂಶ ವಿಶ್ಲೇಷಣೆ

# ಅಧ್ಯಾಯ ಐದು

## ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಬೆಳಗಲಿ ಗ್ರಾಮದಲ್ಲಿ ಅನುಷ್ಠಾನಗೊಳಿಸಲಾದ ಯೋಜನೆಯ ದತ್ತಾಂಶ ವಿಶ್ಲೇಷಣೆ

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕುರಿತು ಅತೀ ಹಿಂದುಳಿದ ಪ್ರದೇಶವಾದ ಉತ್ತರ ಕರ್ನಾಟಕದ ಬಾಗಲಕೋಟ ಜಿಲ್ಲೆಯ ಮುಧೋಳ ತಾಲೂಕಿನ ಬೆಳಗಲಿ ಗ್ರಾಮದಲ್ಲಿ ಕೈಗೊಂಡ ಕ್ರಿಯಾ ಸಂಶೋಧನೆಯ ಅಧ್ಯಯನದಲ್ಲಿನ ಕೆಲವು ಪ್ರಮುಖ ಸಂಗತಿಗಳನ್ನು ಸಂದರ್ಶನ ಮತ್ತು ಸಮೀಕ್ಷೆಯ ಮೂಲಕ ಸಮೀಕರಿಸಲಾಯಿತು. ಈ ಯೋಜನೆಯ ಫಲಾನುಭವಿಗಳ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಮತ್ತು ಯೋಜನೆಯ ಕುರಿತು ಫಲಾನುಭವಿಗಳ ಪ್ರತಿಕ್ರಿಯೆಗಳನ್ನು ಹಾಗೂ ಯೋಜನೆಯ ಸಾದಕ-ಬಾಧಕಗಳನ್ನು ತಿಳಿಯುವ ಹಿನ್ನೆಲೆಯಲ್ಲಿ ಅಧ್ಯಯನ ಕೈಕೊಳ್ಳಲಾಯಿತು. ಆದ್ದರಿಂದ ಅಧ್ಯಯನದಿಂದ ಈ ಕೆಳಗಿನ ಅಂಶಗಳು ಪ್ರಮುಖವಾಗಿ ಕಂಡುಬಂದವು.

೧. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳಾದ ಬಡತನ ನಿವಾರಣೆ, ಗ್ರಾಮೀಣ ನಿರುದ್ಯೋಗ ನಿವಾರಣೆ, ಯೋಜನೆ ಮತ್ತು ಜನಭಾಗಿತ್ವ ಹಾಗೂ ಯೋಜನೆಯ ವಿವಿಧ ಹಂತಗಳು ಹಾಗೂ ಅದರ ಅನುಷ್ಠಾನದಲ್ಲಿ ಇರುವ ಲೋಪದೋಷಗಳು ಕಂಡುಬರುತ್ತವೆ.

೨. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಧಿನಿಯಮದಲ್ಲಿಯ ವಿವಿಧ ಪ್ರಕ್ರಿಯಾ ವಿಧಾನಗಳನ್ನು ಹಾಗೂ ಫಲಿತಾಂಶಗಳನ್ನು ಪರಾಮರ್ಶನದ ಮೂಲಕ ಕಂಡುಕೊಳ್ಳಲಾಗಿದೆ.

೩. ಅಧ್ಯಯನಕ್ಕೆ ಆಯ್ದುಕೊಂಡ ಬೆಳಗಲಿ ಗ್ರಾಮದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಒಟ್ಟು ೪೧೨ ಕುಟುಂಬಗಳಿಂದ ೮೭೧ ಫಲಾನುಭವಿಗಳು ಉದ್ಯೋಗ ಅರಸಿಕೊಂಡು ಗ್ರಾಮ ಪಂಚಾಯತಿಯಲ್ಲಿ ಹೆಸರು ನೋಂದಾಯಿಸಿಕೊಂಡಿರುವುದು ಕಂಡುಬರುತ್ತದೆ.

೪. ಈ ಯೋಜನೆಯಡಿಯಲ್ಲಿ ೨೨೧ ಕುಟುಂಬದ ೪೮೦ ಫಲಾನುಭವಿಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆಂದು ಕಂಡುಬರುತ್ತದೆ.

೫. ಈ ಯೋಜನೆಯಡಿಯಲ್ಲಿ ೪ ಕುಟುಂಬದಿಂದ ೧೬ ಪರಿಶಿಷ್ಟ ಪಂಗಡದವರು ಮತ್ತು ಒಟ್ಟು ೧೮೭ ಕುಟುಂಬಗಳಿಂದ ೩೭೫ ಇತರೇ ಸಾಮಾನ್ಯ ವರ್ಗಕ್ಕೆ ಸೇರಿದವರಾಗಿದ್ದಾರೆಂದು ಕಂಡುಬರುತ್ತದೆ.

೬. ಈ ಯೋಜನೆಯಲ್ಲಿ ಒಟ್ಟು ೮೭೧ ಫಲಾನುಭವಿಗಳಲ್ಲಿ ಮಹಿಳೆಯರ ಸಂಖ್ಯೆ ೪೬೯ ಇರುತ್ತದೆ ಹಾಗೂ ಪುರುಷರ ಸಂಖ್ಯೆ ೪೦೨ ಇರುವುದು ಕಂಡುಬರುತ್ತದೆ.

೭. ಅಧ್ಯಯನದ ದತ್ತಾಂಶಗಳನ್ನು ವಿಶ್ಲೇಷಿಸಿದಾಗ ಸ್ತ್ರೀ-ಪುರುಷರ, ಗ್ರಾಮಮೂಲನಿವಾಸಿಗಳ ಹಾಗೂ ವಲಸೆಗಾರರ ಮತ್ತು ವಯೋ ರಚನೆಗಳ ಬಗ್ಗೆ ವಿವರವಾದ ಮಾಹಿತಿ ದೊರೆಯುತ್ತದೆ.

೮. ಈ ಅಧ್ಯಯನದ ವಿಶ್ಲೇಷಣೆಯಿಂದ ಸ್ತ್ರೀಯರು, ಮೂಲಗ್ರಾಮನಿವಾಸಿಗಳು ಮತ್ತು ವಯಸ್ಕ ಫಲಾನುಭವಿಗಳ ಸಂಖ್ಯೆ ಅನುಕ್ರಮವಾಗಿ ಅಧಿಕವಾಗಿರುವುದು ಕಂಡುಬರುತ್ತದೆ.

೯. ಫಲಾನುಭವಿಗಳ ಆದಾಯ ಮಟ್ಟವನ್ನು ಪರಿಶೀಲಿಸಿದಾಗ ಬಹಳಷ್ಟು ಕಾರ್ಮಿಕರು ಬಡತನ ರೇಖೆಯ ಕೆಳಗಿನ ಸ್ಥಾನ-ಮಾನ ಹೊಂದಿರುವುದು ಕಂಡುಬರುವುದು. ಇದಕ್ಕೆ ಭೂರಹಿತ ಸ್ಥಿತಿ, ಅರೇ ನಿರುದ್ಯೋಗ, ಕಡಿಮೆ ಕೂಲಿ ಪ್ರಮುಖ ಅಂಶಗಳು ಕಾರಣವಾಗಿರುವುದು ಕಂಡುಬರುತ್ತದೆ.

೧೦. ಹೆಚ್ಚಿನ ಸಂಖ್ಯೆಯ ಕಾರ್ಮಿಕರು ವಿವಾಹಿತರಾಗಿದ್ದು, ಅವಿಭಕ್ತ ಕುಟುಂಬಗಳಲ್ಲಿ ಅಧಿಕ ಪ್ರಮಾಣದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ.

೧೧. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಬಗ್ಗೆ ಹಾಗೂ ಇತರೇ ಸಂಬಂಧಿಸಿದ ಪ್ರಕ್ರಿಯೆಯಲ್ಲಿ ಪಂಚಾಯತಿ ರಾಜ್‌ಗಳ ವ್ಯವಸ್ಥೆ ಮತ್ತು ಸರಕಾರ ಸಕ್ರಿಯವಾಗಿ ಸ್ಪಂದಿಸಿಲ್ಲವೆಂಬುದು ಗೋಚರಿಸುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಅನಕ್ಷರತೆ ಮತ್ತು ಬಡತನವೆನ್ನಬಹುದು.

೧೨. ಈ ಯೋಜನೆಯಡಿಯಲ್ಲಿ ದುಡಿಯುವ ಫಲಾನುಭವಿಗಳಿಗೆ ನಿಯಮಾನುಸಾರ ಹೊಂದಬಹುದಾದ ಮೂಲಭೂತ ಸೌಲಭ್ಯಗಳಾದ ಶುದ್ಧ ಕುಡಿಯುವ ನೀರು, ಪ್ರಥಮ ಚಿಕಿತ್ಸೆಯ ಸೌಲಭ್ಯ, ಅಪಘಾತದ ಸಂದರ್ಭದಲ್ಲಿ ತುರ್ತು ಚಿಕಿತ್ಸೆ ಹಾಗೂ ಆರ್ಥಿಕ ಪರಿಹಾರ, ಕೆಲಸ ಇಲ್ಲದ ಸಂದರ್ಭಗಳಲ್ಲಿ ಪರಿಹಾರ ಧನ ಹೊಂದುವ ಹಕ್ಕು, ಉದ್ಯೋಗ ಸ್ಥಳದಲ್ಲಿ ಚಿಕ್ಕಮಕ್ಕಳ ಪಾಲನೆ ಮಾಡುವ ಅನುಕೂಲತೆ ಇಲ್ಲದೇ ಇರುವುದು ಕಂಡುಬಂದಿತು.

ಒಟ್ಟಿನಲ್ಲಿ ಆಯ್ದ ಗ್ರಾಮ ಪಂಚಾಯತಿಯ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವಿವಿಧ ಕಾರ್ಯಕ್ರಮಗಳು ವ್ಯವಸ್ಥಿತವಾಗಿ ಯೋಜಿಸದ ಕಾರಣ ಮತ್ತು ಬೆಲೆ ಏರಿಕೆಯ ಹಿನ್ನೆಲೆಯಲ್ಲಿ ಕನಿಷ್ಠ ಕೂಲಿ ಫಲಾನುಭವಿಗಳ ಜೀವನ ನಿರ್ವಹಣೆಗೆ ಸಾಲದೇ ಇರುವ ಕಾರಣ ಈ ಯೋಜನೆ ಪ್ರಗತಿಪರವಾಗಿ ಜಾರಿಯಾಗುವಲ್ಲಿ ಹಿನ್ನೆಡೆಯಾಗಿದೆ.

**ವಯೋರಚನೆ ಸ್ತ್ರೀ-ಪುರುಷ ಮತ್ತು ಮೂಲವಾಸಿಗಳ - ವಲಸಿಗರ ಪ್ರಮಾಣ**

**ಕೋಷ್ಟಕ - ೫.೧**

| ವಯೋಮಾನ | ೧೮-೨೫ | ೨೫-೩೫ | ೩೫-೪೫ | ೪೫-೫೫ | +೫೫ |
|---|---|---|---|---|---|
| ಪುರುಷ | ೦೬ | ೦೭ | ೧೦ | ೧೦ | ೧೪ |
| ಮಹಿಳೆ | ೦೫ | ೨೨ | ೧೫ | ೦೬ | ೦೫ |
| ಮೂಲವಾಸಿಗಳು | ೧೦ | ೨೪ | ೩೧ | ೨೪ | ೦೧ |
| ವಲಸಿಗರು | ೦೧ | ೦೫ | ೦೩ | ೦೧ | ೦೦ |

**ಕೋಷ್ಟಕ - ೫.೧ ರ ವಿಶ್ಲೇಷಣೆ :**

೧. ಬೆಳಗಲಿ ಗ್ರಾಮದಲ್ಲಿಯ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಎಪ್ರಿಲ್ ೨೦೦೮ ರಿಂದ ಅನುಷ್ಠಾನಗೊಳಿಸಲಾಗಿದೆ.

೨. ಈ ಯೋಜನೆಯಲ್ಲಿ ವಿವಿಧ ವಯೋಮಾನದ ಸ್ತ್ರೀ ಮತ್ತು ಪುರುಷರು ಪಾಲ್ಗೊಂಡಿದ್ದು ಮಹಿಳೆಯರ ಸಂಖ್ಯೆ ೫೩ ಮತ್ತು ಪುರುಷರ ಸಂಖ್ಯೆ ೪೭ ಇರುತ್ತದೆ.

೩. ಈ ಯೋಜನೆಯಡಿಯಲ್ಲಿ ಬಾಲಕಾರ್ಮಿಕರನ್ನು ಬಳಸಿಕೊಳ್ಳದಂತೆ ಎಚ್ಚರಿಕೆ ವಹಿಸಿರುವುದು ಸ್ಪಷ್ಟವಾಗುತ್ತದೆ.

೪. ಯೋಜನೆಯಡಿಯಲ್ಲಿ ಬೆಳಗಲಿಯ ಮೂಲವಾಸಿಗರಷ್ಟೇ ಅಲ್ಲದೆ ವಲಸಿಗರಿಗೂ ಕಾಮಗಾರಿಗಳ ಕೆಲಸದಲ್ಲಿ ನಿರತರಾಗಲು ಅವಕಾಶ ಒದಗಿಸಿಕೊಡಲಾಗಿರುವುದು ಕಂಡುಬರುತ್ತದೆ. ಮೂಲವಾಸಿ ಫಲಾನುಭವಿಗಳ ಸಂಖ್ಯೆ ೯೦ ಇದ್ದು ವಲಸಿಗರ ಸಂಖ್ಯೆ ೧೦ ಮಾತ್ರ ಇದೆ.

೫. ೧೮ ರಿಂದ ೨೫ ವಯೋಮಾನದ ಫಲಾನುಭವಿಗಳ ಸಂಖ್ಯೆ ೧೧ ಇದ್ದು, ೨೫-೩೫ ವಯೋಮಾನದ ಫಲಾನುಭವಿಗಳ ಸಂಖ್ಯೆ ೨೯, ೩೫-೪೫ ವಯೋಮಾನದ ಫಲಾನುಭವಿಗಳ ಸಂಖ್ಯೆ ೨೫, ೪೫-೫೫ ವಯೋಮಾನದ ಫಲಾನುಭವಿಗಳ ಸಂಖ್ಯೆ ೧೬ ಮತ್ತು ೫೫ ಕ್ಕಿಂತ ಅಧಿಕ ವಯೋಮಾನದ ಫಲಾನುಭವಿಗಳ ಸಂಖ್ಯೆ ೧೯ ಇರುತ್ತದೆ.

ಹೀಗೆ ಫಲಾನುಭವಿಗಳು ವಿವಿಧ ವಯೋಮಾನದಿಂದ ಹಾಗೂ ವಿವಿಧ ಕುಟುಂಬಗಳಿಂದ ಮೂಲವಾಸಿಗಳು, ವಲಸಿಗರು, ಮಹಿಳೆ ಮತ್ತು ಪುರುಷರು ಎಂಬ ಸಮಾಜದ ವಿವಿಧ ರಂಗಗಳಿಂದ ಪಾಲ್ಗೊಂಡಿರುವುದು ಕಂಡುಬರುತ್ತದೆ. ಮುಂದೆ ತೋರಿಸಲಾದ ಆಕೃತಿಗಳ ಮೂಲಕ ಅವರ ವೈವಾಹಿಕ ಸ್ಥಿತಿ, ಶೈಕ್ಷಣಿಕ ಗುಣಮಟ್ಟ ಈ ಯೋಜನೆಯ ಬಗೆಗಿನ ಅರಿವು ಲಿಂಗಸಂಬಂಧಿ ಆಯಾಮ ಮುಂತಾದವುಗಳ ಮೂಲಕ ಸಾದರಪಡಿಸಲಾಗಿದೆ.

**ಆಕೃತಿ - ೧**




ಈ ಯೋಜನೆಯ ಫಲಾನುಭವಿಗಳು ೧೦೦ ಜನರಿರುತ್ತಾರೆ. ಅವರಲ್ಲಿ ವಿವಾಹಿತರ ಸಂಖ್ಯೆ ೬೪, ಅವಿವಾಹಿತರ ಸಂಖ್ಯೆ ೩೦ ಮತ್ತು ವಿಧವೆ/ವಿಧುರರ ಸಂಖ್ಯೆ ೬ ಇರುತ್ತದೆ. ಹಾಗೂ ವಿಚ್ಛೇದಿತರ ಸಂಖ್ಯೆಯನ್ನು ಒಳಗೊಳ್ಳದಿರುವದನ್ನು ಮೇಲಿನ ವೈವಾಹಿಕ ಸ್ಥಿತಿ ಆಕೃತಿ ೧ ರಿಂದ ತಿಳಿದು ಬರುತ್ತದೆ.

**ಆಕೃತಿ - ೨**



ಆಕೃತಿ - ೨ ಫಲಾನುಭವಿಗಳ ಶೈಕ್ಷಣಿಕ ಮಟ್ಟವನ್ನು ವಿವರಿಸುತ್ತದೆ. ಈ ಆಕೃತಿಯನ್ನು ಪರಿಶೀಲಿಸಿದಾಗ ಒಟ್ಟು ೧೦೦ ಜನ ಫಲಾನುಭವಿಗಳಲ್ಲಿ ಪದವಿ, ಉನ್ನತ ಪದವಿ ಹಾಗೂ ಡಿಪ್ಲೋಮಾ/ಐಟಿಐ ವ್ಯಾಸಂಗ ಮಾಡಿರುವವರು ಯಾರು ಇಲ್ಲ. ಬಹುಜನ ಫಲಾನುಭವಿಗಳು ಅನಕ್ಷರಸ್ಥರಿರುವರು. ಅವರ ಪ್ರಮಾಣ ಶೇ. ೨೦ ರಷ್ಟಿದೆ. ಅದರಲ್ಲಿ ಮಹಿಳೆಯರ ಸಂಖ್ಯೆ ೪೮ ಹಾಗೂ ಪುರುಷರ ಸಂಖ್ಯೆ ೨೨ ಇರುವುದು ಕಂಡುಬರುತ್ತದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಸಾಕ್ಷರತೆಯ ಪ್ರಮಾಣ ನಿರೀಕ್ಷತೆಯನ್ನು ತಲುಪಿಲ್ಲ. ಪ್ರೌಢ ಶಾಲಾ ಹಂತದವರೆಗೆ ವ್ಯಾಸಂಗ ಮುಗಿಸಿ ಈ ಯೋಜನೆಯಡಿ ದುಡಿಯುವ ಪುರುಷರ ಸಂಖ್ಯೆ ೧೦ ಇದ್ದು, ಮಹಿಳೆಯರ ಸಂಖ್ಯೆ ೧ ಇದೆ. ಅದೇ ರೀತಿಯಾಗಿ ಪ್ರಾಥಮಿಕ ಶಿಕ್ಷಣ ಪಡೆದು ಈ ಯೋಜನೆಯಡಿಯಲ್ಲಿ ದುಡಿಯುವ ಪುರುಷ ಫಲಾನುಭವಿಗಳ ಸಂಖ್ಯೆ ೧೪ ಮತ್ತು ಸ್ತ್ರೀಯರ ಸಂಖ್ಯೆ ೫ ಇರುವುದು ಕಂಡುಬರುತ್ತದೆ.

**ಆಕೃತಿ - ೩**




ಮೇಲಿನ ಆಕೃತಿ - ೩ ಬೆಳಗಲಿ ಗ್ರಾಮದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆಯ ಬಗ್ಗೆ ಫಲಾನುಭವಿಗಳಿಗಿರುವ ಅರಿವಿನ ಬಗ್ಗೆ ತಿಳಿಸುತ್ತದೆ. ಶೇ. ೫೦ ರಷ್ಟು ಫಲಾನುಭವಿಗಳಿಗೆ ಮಧ್ಯಮ ಮಟ್ಟದ ಅರಿವು ಶೇ. ೧೦ ರಷ್ಟು ಫಲಾನುಭವಿಗಳಿಗೆ ಕೆಳಮಟ್ಟದ ಅರಿವು ಮತ್ತು ಶೇ. ೪೦ ರಷ್ಟು ಫಲಾನುಭವಿಗಳಿಗೆ ಈ ಯೋಜನೆಯ ಬಗ್ಗೆ ಅಧಿಕಮಟ್ಟದ ಅರಿವು ಇರುವ ಬಗ್ಗೆ ಸ್ಪಷ್ಟಪಡಿಸುತ್ತದೆ.

# ಅಧ್ಯಾಯ ಆರು
# ಸಮಾರೋಪ ಮತ್ತು ಸಲಹೆಗಳು

೬.೧ ಅಧ್ಯಯನದಿಂದ ಕಂಡುಕೊಂಡ ಸಂಗತಿಗಳು

೬.೨ ಸಲಹೆಗಳು

೬.೩ ಮುಂದಿನ ಅಧ್ಯಯನಕ್ಕೆ ಮಾರ್ಗದರ್ಶನ

# ಅಧ್ಯಾಯ ಆರು
# ಸಮಾರೋಪ ಮತ್ತು ಸಲಹೆಗಳು

**೬.೧ ಅಧ್ಯಯನದಿಂದ ಕಂಡುಕೊಂಡ ಸಂಗತಿಗಳು :**

ರಾಷ್ಟ್ರದ ಗ್ರಾಮೀಣ ಅಭಿವೃದ್ಧಿಯ ಪ್ರಮುಖ ನಿಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಜನಯೋಜನೆ ವಾಸ್ತವಿಕವಾಗಿ ಗ್ರಾಮೀಣ ಜನರ ಸಾಮಾಜಿಕ, ಆರ್ಥಿಕ ಜೀವನಮಟ್ಟವನ್ನು ಉನ್ನತೀಕರಿಸುವ ಗುರಿಯನ್ನು ಹೊಂದಿದೆ. ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗ ಮತ್ತು ಬಡತನವನ್ನು ನಿರ್ಮೂಲನೆಗೊಳಿಸುವ ಮಹದಾಶೆಯ ಈ ಕಾರ್ಯಕ್ರಮ ವಾಸ್ತವಿಕವಾಗಿ ರಾಜ್ಯ ಆಡಳಿತಗಾರರಿಗೆ, ಯೋಜನಾಕಾರರಿಗೆ ಹಾಗೂ ಸಾಮಾಜಿಕ ವಿಜ್ಞಾನಿಗಳಿಗೆ ಹೊಸ ಸವಾಲುಗಳನ್ನೇ ಒಡ್ಡಿದೆ.

ಅಧ್ಯಯನದ ದತ್ತಾಂಶ ವಿಶ್ಲೇಷಣೆಗಳನ್ನು ಪ್ರಾಕಲ್ಪನೆ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಈ ಕೆಳಗಿನ ಸಂಗತಿಗಳು ಪ್ರಮುಖವಾಗಿವೆ.

೧. ಯೋಜನೆಯ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ಪರೀಕ್ಷಿಸಿದಾಗ ಪ್ರಮುಖವಾಗಿ ಕಂಡುಬರುವುದೇನೆಂದರೆ ಬಹಳಷ್ಟು ಫಲಾನುಭವಿಗಳು ಸ್ವಂತ ಜಮೀನು ಇಲ್ಲದವರು ಹಾಗೂ ಮಹಿಳೆಯರು ಅದರಲ್ಲೂ ವಿಶೇಷವಾಗಿ ಪರಿಶಿಷ್ಟ ಜಾತಿ /ಪಂಗಡ ಹಾಗೂ ಇತರೇ ಹಿಂದುಳಿದ ವರ್ಗಗಳ ಶ್ರಮಿಕರು ಈ ಯೋಜನೆಯಡಿಯಲ್ಲಿ ಫಲಾನುಭವಿಗಳಾಗಿದ್ದಾರೆ. ಬಹುಶಃ ಇಂತಹ ಸ್ಥಿತಿಗತಿಗೆ ಗ್ರಾಮೀಣ ಪ್ರದೇಶದಲ್ಲಿಯ ಬಡತನ, ಅನಕ್ಷರತೆ ಹಾಗೂ ಭೂರಹಿತ ಕಾರ್ಮಿಕರ ನಿರುದ್ಯೋಗದ ಭೀತಿ ಅಲ್ಲದೆ ಭೌಗೋಳಿಕ ಅಂಶಗಳಾದ ಬರಗಾಲ, ಮಣ್ಣಿನ ಸತ್ವಹೀನತೆ ಪ್ರಮುಖ ಕಾರಣಗಳಾಗಿವೆ.

೨. ಯೋಜನೆಯ ಫಲಾನುಭವಿಗಳು ಶೈಕ್ಷಣಿಕವಾಗಿ ಹಿಂದುಳಿದಿದ್ದು ಅಕುಶಲಕರ್ಮಿಗಳ ವರ್ಗಕ್ಕೆ ಸೇರಿದವರಾಗಿದ್ದಾರೆ. ಬಹುಸಂಖ್ಯಾತ ಫಲಾನುಭವಿಗಳು ಸ್ಥಳೀಯರಾಗಿದ್ದು, ಅವಿಭಕ್ತ ಕುಟುಂಬಕ್ಕೆ ಸೇರಿದವರಾಗಿದ್ದಾರೆ. ಆರ್ಥಿಕ ಸ್ಥಾನಮಾನದ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಬಡತನ ರೇಖೆಯ ಕೆಳಗೆ ವಾಸಿಸುವ ಫಲಾನುಭವಿಗಳ ಸಂಖ್ಯೆ ಅಧಿಕವಾಗಿದೆ.

೩. ಫಲಾನುಭವಿಗಳ ವಯೋರಚನೆಯನ್ನು ಗಮನಿಸಿದಾಗ ಬಹಳಷ್ಟು ಜನ ವಯಸ್ಕರ ವರ್ಗಕ್ಕೆ ಸಂಬಂಧಪಟ್ಟವರಾಗಿದ್ದಾರೆ. ವೈವಾಹಿಕ ಸ್ಥಿತಿಗತಿ ಗಮನಿಸಿದಾಗ ಬಹಳಷ್ಟು ಫಲಾನುಭವಿಗಳು ವಿವಾಹಿತರಾಗಿದ್ದು ಕಂಡುಬರುತ್ತದೆ. ವಿವಾಹ ವಿಚ್ಛೇದಿತರ ಸಂಖ್ಯೆಯೂ ಕೂಡ ಅತ್ಯಂತ ಕಡಿಮೆಯಾಗಿದೆ.

೪. ಋಣಭಾರ ಸಮಸ್ಯೆಯು ಫಲಾನುಭವಿಗಳಲ್ಲಿ ಅಧಿಕವಾಗಿದ್ದು, ಸಮಸ್ಯೆಯ ನಿವಾರಣೆಗೆ ನಿರ್ಧಿಷ್ಟ ಕಾರ್ಯಯೋಜನೆಗಳು ಅನುಕೂಲಕರವಾಗಿಲ್ಲ.

೫. ಈ ಯೋಜನೆಯಲ್ಲಿ ಹೆಸರು ನೋಂದಾಯಿಸಲು ಸರಿಯಾದ ಮಾಹಿತಿಗಳು ಫಲಾನುಭವಿಗಳಿಗೆ ಹೆಚ್ಚಾಗಿ ಸರಕಾರಿ ಇಲಾಖೆಯಿಂದ ಪಡೆಯದೆ, ಗೆಳೆಯರಿಂದ ಹಾಗೂ ಇತರ ಮೂಲಗಳಿಂದ ಮಾಹಿತಿಯನ್ನು ಹೊಂದಿದ್ದು ಕಂಡುಬರುತ್ತದೆ. ಅದೇ ರೀತಿ ಉದ್ಯೋಗ ಕಾರ್ಡ್/ಪತ್ರ ಪಡೆಯಲು ತೊಂದರೆಯಾಗಿಲ್ಲವೆಂಬುದು ಸಾಮಾನ್ಯವಾಗಿ ಕಂಡುಬರುತ್ತದೆ.

೬. ನಿರಂತರವಾಗಿ ವರ್ಷದಲ್ಲಿ ನೂರು ದಿನಗಳವರೆಗೆ ಉದ್ಯೋಗ ದೊರೆಯುತ್ತದೆ ಎಂಬುವ ವಿಶ್ವಾಸ ಸಮೀಕ್ಷೆಯಿಂದ ಕಂಡುಬರುತ್ತದೆ. ಅಲ್ಲದೆ ಸರಾಸರಿ ಪ್ರತಿದಿನ ೮ ಗಂಟೆಗಳ ವರೆಗೆ ಕಾರ್ಯನಿರ್ವಹಿಸಿದನ್ನು ಗುರುತಿಸಲಾಗಿದೆ. ಫಲಾನುಭವಿಗಳು ತಮ್ಮ ವೇತನ ಪಡೆಯುವಲ್ಲಿ ಸುಮಾರು ೨ ವಾರಗಳವರೆಗೆ ವಿಳಂಬವಾಗಿರುವದು ಅಧ್ಯಯನದಿಂದ ಕಂಡುಬರುತ್ತದೆ.

೭. ಉದ್ಯೋಗ ಸ್ಥಳದಲ್ಲಿ ಚಿಕ್ಕ ಮಕ್ಕಳ ಆರೈಕೆಗಾಗಿ ನಿರ್ಧಿಷ್ಟ ಪಾಲಕರನ್ನು ನಿಯೋಜಿಸದೇ ಇರುವುದು ಕೂಡಾ ಈ ಯೋಜನೆಯ ಅನುಷ್ಠಾನದ ಒಂದು ದೋಷವಾಗಿದೆ. ಉದ್ಯೋಗದ ಸ್ಥಳದಲ್ಲಿ ಕೆಲಸಗಾರರಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ಇಲ್ಲದೇ ಇರುವುದು ಕಂಡುಬರುತ್ತದೆ. ಅಪಘಾತ, ಅವಘಡಗಳು ಸಂಭವಿಸಿದ ಸಂದರ್ಭಗಳಲ್ಲಿ ಪ್ರಥಮ ಚಿಕಿತ್ಸೆ ಸೌಲಭ್ಯದ ಕೊರತೆ ಮತ್ತು ಅಪಘಾತದಿಂದ ಅಂಗಾಂಗಗಳನ್ನು ಕಳೆದುಕೊಂಡು ಶಾಶ್ವತವಾಗಿ ಊನವಾದಾಗ ಪರಿಹಾರದ ಭರವಸೆಯು ಇಲ್ಲದೇ ಇರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೮. ಫಲಾನುಭವಿಗಳಿಗೆ ನೀಡುವ ಕಾಮಗಾರಿಯ ಹಂಚಿಕೆಯಲ್ಲಿ ಹೆಚ್ಚಾಗಿ ರಸ್ತೆ ಕಾಮಗಾರಿ, ಸಾಮಾಜಿಕ ಅರಣ್ಯಕ್ಕೆ ಆದ್ಯತೆ ನೀಡಿರುವುದು ಸಮೀಕ್ಷೆಯಿಂದ ಕಂಡುಬರುತ್ತದೆ.

೯. ಅಗತ್ಯ ವಸ್ತುಗಳ ಬೆಲೆ ಏರಿಕೆಯಿಂದಾಗಿ, ಜೀವನ ನಿರ್ವಹಣೆಯ ವೆಚ್ಚ ಅಧಿಕವಾಗಿ ಅನೇಕ ಫಲಾನುಭವಿಗಳು ದಿನಗೂಲಿಯನ್ನು ಹೆಚ್ಚಿಸಬೇಕೆಂದು ಅಪೇಕ್ಷೆ ಪಟ್ಟಿದ್ದು ಈ ಅಧ್ಯಯನದಿಂದ ತಿಳಿದುಬರುತ್ತದೆ.

೧೦. ಈ ಯೋಜನೆಯಲ್ಲಿ ಲಿಂಗ ತಾರತಮ್ಯವಿಲ್ಲದ ದಿನಗೂಲಿ ನಿಗದಿ ಮಾಡಿರುವುದು ಒಂದು ಪ್ರಮುಖ ಸಂಗತಿಯಾಗಿದೆ.

೧೧. ಕೆಲಸವಿಲ್ಲದ ದಿನದಲ್ಲಿ ಕೂಲಿ ಕೊಡದೇ ಇರುವುದು ಸಮೀಕ್ಷೆಯಿಂದ ಕಂಡುಬಂದಿದೆ.

೧೨. ಬೆಳಗಲಿಯ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಕೈಗೊಂಡ ೧೬ ಕಾಮಗಾರಿಗಳನ್ನು ೧೯೦.೬೨ ಲಕ್ಷ ರೂ.ಗಳ ವೆಚ್ಚದಲ್ಲಿ ಕೈಗೊಳ್ಳಲಾಗಿದ್ದು, ಇದಕ್ಕಾಗಿ ೧೫೪೫೫೭ ಮಾನವ ದಿನಗಳ ಬಳಕೆಯಾಗಿರುವುದು ಮತ್ತು ೧೧೪.೩೭ ಲಕ್ಷ ರೂ.ಗಳ ಕೂಲಿ ವೆಚ್ಚ ಮತ್ತು ೭೬.೨೫ ಲಕ್ಷರೂ.ಗಳ ಸಾಮಗ್ರಿಗಳಿಗಾಗಿ ವೆಚ್ಚ ಮಾಡಿದ್ದು ಕಂಡು ಬರುತ್ತದೆ.

**೬.೨ ಸಲಹೆಗಳು :**

೧. ಸಮೂಹ ಮಾಧ್ಯಮಗಳ ಮೂಲಕ ಈ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಗ್ರಾಮೀಣ ಜನರಲ್ಲಿ ಅರಿವು ಮೂಡಿಸುವುದು ಅತ್ಯಂತ ಅವಶ್ಯಕವಾಗಿದ್ದು, ಈ ಹಿನ್ನೆಲೆಯಲ್ಲಿ ಸರಕಾರ ನಿರ್ದಿಷ್ಟ ಹಾಗೂ ಪಾರದರ್ಶಕ ಜಾಗೃತ ಕಾರ್ಯಕ್ರಮಗಳನ್ನು ಕಾಲಮಿತಿಯಲ್ಲಿ ಪ್ರಾಮಾಣಿಕವಾಗಿ ಕೈಕೊಳ್ಳಬೇಕು. ಇದಕ್ಕಾಗಿ ದಿನಪತ್ರಿಕೆ, ದೂರದರ್ಶನ, ರೇಡಿಯೋ ಇತರ ಪ್ರಬಲ ಸಮೂಹ ಮಾಧ್ಯಮಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬೇಕು.

೨. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮೌಲ್ಯಮಾಪನವನ್ನು ಕಾಲಕಾಲಕ್ಕೆ ಸಂಪನ್ಮೂಲ ವ್ಯಕ್ತಿಗಳಿಂದ ಹಾಗೂ ಸ್ಥಳೀಯ ಸರಕಾರಗಳ ಪ್ರತಿನಿಧಿಗಳ ಸಮ್ಮುಖದಲ್ಲಿ ಮತ್ತು ಫಲಾನುಭವಿಗಳ ಪ್ರತಿನಿಧಿಗಳೊಂದಿಗೆ ಚರ್ಚಿಸಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಬೇಕು.

೩. ಈ ಯೋಜನೆಯ ಅಡಿಯಲ್ಲಿ ಕೆಲಸದ ಸ್ಥಳಗಳಿಗೆ ಹೋದ ಚಿಕ್ಕಮಕ್ಕಳ ಪೋಷಣೆಗಾಗಿ ಸೂಕ್ತ ಮತ್ತು ಶಾಸನಾತ್ಮಕ ಕ್ರಮಗಳನ್ನು ಜರುಗಿಸಬೇಕು.

೪. ಪ್ರಥಮ ಚಿಕಿತ್ಸೆ ವ್ಯವಸ್ಥಾ ಸೌಲಭ್ಯ ಹಾಗೂ ಆ ಕಾರ್ಯ ನಿರ್ವಹಿಸಲು ಅಂಗೀಕೃತ ಸಂಸ್ಥೆಯಿಂದ ತರಬೇತಿ ಪಡೆದ ವ್ಯಕ್ತಿಗಳನ್ನು ನೇಮಕಾತಿ ಮಾಡಿಕೊಳ್ಳಬೇಕು.

೫. ಈ ಯೋಜನೆಯ ಫಲಾನುಭವಿಗಳಿಗೆ ಕನಿಷ್ಠ ಕೂಲಿಯ ಬಗ್ಗೆ, ಉದ್ಯೋಗ ಹಕ್ಕುಗಳು ಹಾಗೂ ಕಾನೂನುಗಳ ಬಗ್ಗೆ ಉಚಿತ ಕಾನೂನು ನೆರವು ಸಮಿತಿಯಿಂದ ವಿಶೇಷ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಬೇಕು. ಮತ್ತು ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಕರ್ನಾಟಕ ಉಚಿತ ಕಾನೂನು ನೆರವು ಸಮಿತಿ, ರಾಷ್ಟ್ರೀಯ ಸೇವಾ ಯೋಜನೆ ಹಾಗೂ ಕಾರ್ಮಿಕ ಸಂಘಟನೆ ಮುಂತಾದ ಸ್ವಯಂ ಸೇವಾ ಸಂಸ್ಥೆಗಳ ನೆರವನ್ನು ಪಡೆಯುವುದು ಸೂಕ್ತವಾಗಿದೆ.

೬. ಈ ಯೋಜನೆಯಡಿಯಲ್ಲಿ ಆರೋಗ್ಯ ರಕ್ಷಣೆಗಾಗಿ ಫಲಾನುಭವಿಗಳ ಹಿತದೃಷ್ಟಿಯಿಂದ ಎಲ್ಲರಿಗೂ ಆರೋಗ್ಯ ಎಂಬ ವಿಶ್ವಸಂಸ್ಥೆ, ರಾಷ್ಟ್ರ ಮತ್ತು ರಾಜ್ಯಗಳ ಘೋಷಣೆ ಮತ್ತು ಯೋಜನೆಗಳ ಅಡಿಯಲ್ಲಿ ಆರೋಗ್ಯವಿಮೆ ಹಾಗೂ ಅದಕ್ಕೆ ಪೂರಕವಾದ ಇತರ ಸೌಲಭ್ಯಗಳನ್ನು ವ್ಯವಸ್ಥಿತವಾಗಿ ಕಾಲಮಿತಿಯಲ್ಲಿ ವಿಸ್ತರಿಸಲು ಕ್ರಮ ಕೈಕೊಳ್ಳಬೇಕು.

**೬.೩ ಮುಂದಿನ ಅಧ್ಯಯನಕ್ಕೆ ಮಾರ್ಗದರ್ಶನ :**

೧) ಗ್ರಾಮೀಣ ಉದ್ಯೋಗ ಭರವಸೆ ಯೋಜನೆಯ ಯಶಸ್ವಿ ಕಾರ್ಯಾಚರಣೆಯಲ್ಲಿ ಮೂಲಭೂತ ಸೌಲಭ್ಯಗಳ ಪಾತ್ರ.

೨) ಗ್ರಾಮೀಣ ಉದ್ಯೋಗ ಭರವಸೆ ಯೋಜನೆಯ ಬಗ್ಗೆ ಫಲಾನುಭವಿಗಳ ಶಾಸನಬದ್ಧ ಸೌಲಭ್ಯಗಳ ಅರಿವು ಮತ್ತು ಮಾಹಿತಿ ಅಧ್ಯಯನ.

೩) ಉದ್ಯೋಗ ಭರವಸೆ ಯೋಜನೆಯಲ್ಲಿ ಲಿಂಗ ತಾರತಮ್ಯದ ಬಗ್ಗೆ ಹೆಚ್ಚಿನ ಅಧ್ಯಯನ.

೪) ಉದ್ಯೋಗ ಭರವಸೆ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಗ್ರಾಮ ಸಭೆಗಳ ಪಾತ್ರ.

೫) ಉದ್ಯೋಗ ಭರವಸೆ ಯೋಜನೆ ಮತ್ತು ಅಧಿಕಾರಿ ಶಾಹಿಗಳ ಪಾತ್ರ.

# ಕೋಷ್ಠಕ ಮತ್ತು ಆಕೃತಿಗಳ ಯಾದಿ









ಅಧ್ಯಯನ ಕ್ಷೇತ್ರ ಸೂಚಿಸುವ ನಕ್ಷೆ

# ಪ್ರಶ್ನಾವಳಿ

## ಭಾಗ-೧ ಸಾಮಾಜಿಕ, ಆರ್ಥಿಕ ಹಿನ್ನೆಲೆ

೧. ಹೆಸರು :

೨. ಲಿಂಗ :

೩. ವಯಸ್ಸು

೪. ಜಾತಿ/ಧರ್ಮ :

೫. ಮೂಲ ಊರು :

೬. ಶಿಕ್ಷಣದ ಮಟ್ಟ : ಪ್ರಾಥಮಿಕ/ಮಾಧ್ಯಮಿಕ/ಅನಕ್ಷರಸ್ಥ

೭. ವಲಸೆಗಾರರೇ? : ಹೌದು / ಅಲ್ಲ

೮. ಋಣಭಾರ ಇದೆಯೇ? : ಇದೆ / ಇಲ್ಲ

೯. ಸಾಲದ ಮೂಲ : ಬ್ಯಾಂಕ / ಹಣಕಾಸು ಸಂಸ್ಥೆ / ಲೇವಾದೇವಿ / ಸಂಬಂಧಿಕರು / ಗೆಳೆಯರು

೧೦. ಸಾಲ ಇದ್ದರೆ ಎಷ್ಟು? : ರೂ. ೧,೦೦೦ / ರೂ. ೫,೦೦೦ / ರೂ. ೧೦,೦೦೦ / ಮೇಲ್ಪಟ್ಟು

೧೧. ಮಾತೃಭಾಷೆ :

೧೨. ವಿವಾಹಿತ / ಅವಿವಾಹಿತ :

೧೩. ಅವಿಭಕ್ತ / ವಿಭಕ್ತ ಕುಟುಂಬ :

೧೪. ಕುಟುಂಬ ಸದಸ್ಯರ ಸಂಖ್ಯೆ :

೧೫. ಕುಟುಂಬದ ವಾರ್ಷಿಕ ಆದಾಯ :

## ಭಾಗ - ೨ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕುರಿತು

೧. ನೀವು ಅಕುಶಲ ಕಾರ್ಮಿಕರೇ? :

೨. ನೀವು ಈ ಪೂರ್ವದಲ್ಲಿ ಎಲ್ಲಿ ಕೆಲಸ ಮಾಡುತ್ತಿದ್ದಿರಿ? :

೩. ಸ್ವಂತ ಜಮೀನು ಇದೆಯೇ? :

೪. ಇದ್ದರೆ ಎಷ್ಟು? :

೫. ಈ ಯೋಜನೆಯಲ್ಲಿ ಕುಟುಂಬದ ಎಷ್ಟು ಜನ ಹೆಸರು ನೋಂದಾಯಿಸಿದ್ದಿರಿ? :

೬. ಈ ಯೋಜನೆಯ ಮಾಹಿತಿ ಹೇಗೆ ದೊರೆಯಿತು? :

೭. ಉದ್ಯೋಗ ಚೀಟಿ ಪಡೆಯಲು ಏನಾದರು ತೊಂದರೆಯಾಯಿತೇ? :

೮. ಈ ಯೋಜನೆಯ ವಿವಿಧ ಕಾಮಗಾರಿಗಳ ಬಗ್ಗೆ ಗೊತ್ತಿದೆಯೇ? :

೯. ಈ ಯೋಜನೆಯಡಿಯಲ್ಲಿ ಎಷ್ಟು ದಿನಗಳ ಕಾಮಗಾರಿ ಸಿಕ್ಕಿದೆ? :

೧೦. ನಿಮಗೆ ದೊರೆತ ಉದ್ಯೋಗದಲ್ಲಿ ತೃಪ್ತಿ ಇದೆಯೇ ? :

೧೧. ಉದ್ಯೋಗದಲ್ಲಿ ಎಷ್ಟು ಗಂಟೆ ಕೆಲಸ ಮಾಡುತ್ತೀರಿ? :

೧೨. ನೀವು ಬ್ಯಾಂಕು/ಅಂಚೆ ಕಛೇರಿಯಲ್ಲಿ ಖಾತೆ ಹೊಂದಿದ್ದೀರಾ? :

೧೩. ನಿಮ್ಮ ವೇತನ ಖಾತೆಗೆ ಜಮೆ ಆಗುತ್ತದೆಯೇ ? :

೧೪. ವೇತನ ಸಿಗಲು ಎಷ್ಟು ದಿನ ಬೇಕು ? :

೧೫. ಚಿಕ್ಕಮಕ್ಕಳು ನಿಮ್ಮೊಂದಿಗೆ ಉದ್ಯೋಗ ಸ್ಥಳಕ್ಕೆ ಬರುತ್ತಾರೇ? :

೧೬. ಮಕ್ಕಳನ್ನು ನೋಡಿಕೊಳ್ಳಲು ವ್ಯವಸ್ಥೆ ಇದೆಯೇ? :

೧೭. ಕುಡಿಯಲು ಶುದ್ಧ ನೀರಿನ ಅನುಕೂಲವಿದೆಯೇ? :

೧೮. ಪ್ರಥಮ ಚಿಕಿತ್ಸೆಯ ವ್ಯವಸ್ಥೆ ಇದೆಯೇ ? :

೧೯. ಉದ್ಯೋಗ ಸಿಗದ ಸಂದರ್ಭದಲ್ಲಿ ಪರಿಹಾರಧನ ನೀಡಿದ್ದಾರೆಯೇ? :

೨೦. ಯಾವ ಕ್ಷೇತ್ರದಲ್ಲಿ ಹೆಚ್ಚಾಗಿ ಉದ್ಯೋಗ ಇರುತ್ತದೆ? :

೧. ಸರಕಾರಿ ಕಟ್ಟಡ    ೩. ಅರಣ್ಯ

೨. ರಸ್ತೆ ಕಾಮಗಾರಿ    ೪. ಭೂ, ಜಲ ಸಂರಕ್ಷಣೆ

೨೧. ಉದ್ಯೋಗ ಹಂಚಿಕೆಯಲ್ಲಿ ತೊಂದರೆ ಇದೆಯೇ? :

೨೨. ಯಂತ್ರೋಪಕರಣಗಳ ಬಳಕೆಯಿದೆಯೇ? :

೨೩. ಅಪಘಾತ ಸಂಭವಿಸಿದಾಗ ಪರಿಹಾರಧನ ನೀಡುವರೇ? :

೨೪. ವಿಮಾ ಸೌಲಭ್ಯವಿದೆಯೇ ? :

೨೫. ಈ ಯೋಜನೆಯಲ್ಲಿ ನೀಡುವ ದಿನದ ವೇತನ ರೂ. ೭೪ / ೮೨ ಸಮಾಧಾನಕರವಾಗಿದೆಯೇ? :

೨೬. ವೇತನವನ್ನು ಹೆಚ್ಚಿಸಬೇಕೆಂದು ಕೇಳುತ್ತೀರಾ ? :

ಉದ್ಯೋಗ ಚೀಟಿ

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

ಉದ್ಯೋಗ ಚೀಟಿ ಸಂಖ್ಯೆ: KN-01-006-004-001/91

ಕುಟುಂಬ ಸಂಕೇತ ಸಂ: 91

ಕುಟುಂಬದ ಮುಖ್ಯಸ್ಥರ ಹೆಸರು ಕಾಶವ್ವ.ಸದಪ್ಪ.ಗುಡ್ಲಾರ

ವರ್ಗ: ಪ.ಜಾತಿ

ನೋಂದಣಿ ದಿನಾಂಕ 03/04/2008

ವಿಳಾಸ :

ಹಳ್ಳಿ : ಬೆಳಗಲಿ

ಪಂಚಾಯತಿ : ಬೆಳಗಲಿ

ತಾಲ್ಲೂಕು : ಮುದೋಳ

ಜಿಲ್ಲೆ : BAGALKOTE(KARNATAKA)

ಒಪ್ಪಿಕೊಂಡ ಅರ್ಜಿದಾರರ ಕುಟುಂಬದ ವಿವರಣೆ

| ಕ್ರ.ಸಂ | | ಲಿಂಗ | ವಯಸ್ಸು |
|---|---|---|---|
| 1 | ಕಾಶವ್ವ.ಸದಪ್ಪ.ಗುಡ್ಲಾರ | ಹೆಣ್ಣು | 35 |

ಅರ್ಜಿದಾರರ ಸಹಿ/ಹೆಬ್ಬೆಟ್ಟಿನ ಗುರುತು

ನೋಂದಣಿ ಅಧಿಕಾರಿಗಳ ಮುದ್ರೆ ಮತ್ತು ಸಹಿ

## ಉದ್ಯೋಗ ಕೋರಿಕೆ ಅವಧಿ

| ಕ್ರ.ಸಂ | ಅರ್ಜಿದಾರರ ಹೆಸರು | ಯಾವ ದಿನಾಂಕ ಮತ್ತು ತಿಂಗಳಿನಿಂದ ಉದ್ಯೋಗ ಕೋರಲಾಗಿದೆ | ಒಟ್ಟು ದಿನಗಳು |
|---|---|---|---|

## ಕೆಲಸದ ಅವಧಿ ಹಾಗೂ ಕೆಲಸ ನೀಡಿದ ವಿವರ

| ಕ್ರ.ಸಂ | ಅರ್ಜಿದಾರರ ಹೆಸರು | ಯಾವ ದಿನಾಂಕ ಮತ್ತು ತಿಂಗಳಿನಿಂದ ಉದ್ಯೋಗ ನೀಡಲಾಗಿದೆ | ಒಟ್ಟು ದಿನಗಳು | ಕಾಮಗಾರಿ ಹೆಸರು |
|---|---|---|---|---|

## ಕೆಲಸದ ಅವಧಿ ಹಾಗೂ ಕೆಲಸದ ಕೊಟ್ಟ ವಿವರ

| ಕ್ರ.ಸಂ | ಅರ್ಜಿದಾರರ ಹೆಸರು | ಯಾವ ದಿನಾಂಕದಿಂದ ಉದ್ಯೋಗ ಪಡೆಯಲಾಗಿದೆ | ಒಟ್ಟು ದಿನಗಳು | ಕಾಮಗಾರಿ ಹೆಸರು | ಮಸ್ಟರ್ ರೋಲ್ ಸಂಖ್ಯೆ | ಪಾವತಿಸಲಾದ ಹಣ |
|---|---|---|---|---|---|---|

# Consolidate Report of Payment to Worker

| : | : | : | |
|---|---|---|---|

**Financial Year** 2008-2009

| S.No. | Job card No. | Applicant Name | Work Name (Work Code) | No of days employment provided | Amount Earned in Rs. |
|---|---|---|---|---|---|
| 1 | KN-01-006-004-001/1 | ಪರಮಾನಂದ ಲೋ. ಮೇತ್ರಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 2 | | ಸತ್ಯವ್ವ.ಲೋಕೇಶ.ಮೆತ್ರಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 3 | KN-01-006-004-001/10 | ಭರಮಪ್ಪ.ಕೇಟ್ಟಪ್ಪ.ಮೆತ್ರಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 2 | 148 |
| 4 | KN-01-006-004-001/105 | ಪರಮಾನಂದಸಂತಪ್ಪ.ಮಳಲಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 4 | 296 |
| 5 | KN-01-006-004-001/16 | ಮುತ್ತಪ್ಪ.ಯಮನಪ್ಪ.ಕ್ಯಾರೆಪ್ಪಗೊಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 6 | KN-01-006-004-001/198 | ಹಣಮಂತ.ಕ[illegible]ಶವ್ವ.ಪಡೆಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 7 | 518 |
| 7 | KN-01-006-004-001/20 | ಮಂಜುಳಾ.ಸತ್ಯವ್ವ.ಕ್ಯಾರೆಪ್ಪಗೊಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 8 | KN-01-006-004-001/227 | ಗಂಗವ್ವ.ಅವ್ವಪ್ಪ.ಕಗ್ಗಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 5 | 370 |
| 9 | KN-01-006-004-001/234 | ರಾಮಪ್ಪ.ವೆಂಕಪ್ಪ ಹುನ್ನೂರ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 25 | 1850 |
| 10 | | ಸಾಯವ್ವ.ಯಂಕಪ್ಪ.ಹುನ್ನೂರ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 18 | 1332 |
| 11 | KN-01-006-004-001/245 | ಗಂಗಪ್ಪ ಕಲ್ಲಪ್ಪ ಕುರೆರ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 3 | 222 |
| 12 | KN-01-006-004-001/27 | ಚಂದ್ರವ್ವ.ಮಾಹಾದೇವ.ಗುರಕಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 13 | KN-01-006-004-001/279 | ಲಕ್ಕವ್ವ.ರಾಮಪ್ಪ.ಚಿಕ್ಕೂರ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 8 | 592 |
| 14 | KN-01-006-004-001/28 | ಬಸಪ್ಪ.ಕೆಟ್ಟೆವ್ವ.ಸರವಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 15 | | ಮಂಜುಳಾ.ಬಸಪ್ಪ.ಸರವಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 1 | 74 |
| 16 | KN-01-006-004-001/305 | ಶಿವಕ್ಕ ವಿಠ್ಠಲ.ಕ್ಯಾರೆಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 5 | 370 |
| 17 | KN-01-006-004-001/328 | ಭಿಮವ್ವ ಮ ಜಗಾದಾಳ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 4 | 296 |
| 18 | KN-01-006-004-001/350 | ನಿಂಗವ್ವ ಉದ್ದಪ್ಪ ತೋಟಗಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 13 | 962 |
| 19 | KN-01-006-004-001/386 | ಗಣಪತಿ ಬಿ ದೋಬಸಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 4 | 296 |
| 20 | KN-01-006-004-001/387 | ರಾಮಪ್ಪ ಶಂ ಯಳ್ಳಾಮಾ[illegible] | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 14 | 1036 |
| 21 | | ಶಂಕ್ರೆಪ್ಪ ರಾ. ಯಳ್ಳಾಮಸಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 8 | 592 |
| 22 | KN-01-006-004-001/388 | [illegible]ನಸವ್ವ ನಿ ಮಗದಮ್ಮ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 4 | 296 |
| 23 | | ನೀಂಗಪ್ಪ ರಾ ಮಗದುಮ್ಮ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 9 | 666 |
| 24 | KN-01-006-004-001/398 | ಲಕ್ಕಪ್ಪ ರಾ ಚಿಕ್ಕೂರ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 14 | 1036 |
| 25 | KN-01-006-004-001/40 | ಜಯಶ್ರೀ ವಿ. ದೊಡಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 3 | 222 |
| 26 | | ವಿಠ್ಠಲ.ಹಣಮಂತ.ದೋಡಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನೆಡುತೋಪು (1501006004/OP/093020608) | 11 | 814 |

| | | | | | |
|---|---|---|---|---|---|
| 27 | KN-01-006-004-001/401 | ಲಕ್ಕಪ್ಪ ಪಾಂ ಬಿರಾಜನವರ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 8 | 592 |
| 28 | KN-01-006-004-001/402 | ಕಲ್ಲಪ್ಪ ಆ ರಬಕವಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 10 | 740 |
| 29 | KN-01-006-004-001/408 | ತುಕಾರಾಮ ಕಾ. ದೊಡಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 1 | 74 |
| 30 | KN-01-006-004-001/409 | ಪರಸಪ್ಪ ಹ. ಹುಲ್ಯಾಳ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 8 | 592 |
| 31 | KN-01-006-004-001/410 | ರಾಮಪ್ಪ ಸಂ. ಹರಿಜನ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 3 | 222 |
| 32 | KN-01-006-004-001/411 | ಪರಮಾನಂದ ಭೀ. ಹುದ್ದಾರ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 8 | 592 |
| 33 | KN-01-006-004-001/412 | ಯಮನಪ್ಪ ಕ. ಬಾವಿಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 4 | 296 |
| 34 | KN-01-006-004-001/414 | ಯಲ್ಲಪ್ಪ ಬ ಚಂದಪ್ಪನವರ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 2 | 148 |
| 35 | KN-01-006-004-001/415 | ಯಮನಪ್ಪ ಲ.ಕಗ್ಗಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 3 | 222 |
| 36 | KN-01-006-004-001/42 | ಚೈತ್ರವ್ವ.ಸಂಗಪ್ಪ.ದೊಡಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 14 | 1036 |
| 37 | | ಸಂಗಪ್ಪ.ಹಣಮಂತ.ದಡಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 21 | 1554 |
| 38 | KN-01-006-004-001/420 | ಶಿವಾನಂದ ಯ. ಕಾಗಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 4 | 296 |
| 39 | KN-01-006-004-001/421 | ಕಲ್ಮೇಶ ಮ. ತಿರಕನ್ನವರ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 1 | 74 |
| 40 | KN-01-006-004-001/57 | ಯಮನಪ್ಪ.ಕಾಶಪ್ಪ.ಬಟಾಟೆಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 4 | 296 |
| 41 | KN-01-006-004-001/68 | ಲಲಿತಾ ಹ. ಜೋಗಪ್ಪಗೋಳ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 1 | 74 |
| 42 | KN-01-006-004-001/70 | ಸುರೇಶ ಜಾನವ್ವ.ಗುದ್ದಾರ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 12 | 888 |
| 43 | KN-01-006-004-001/74 | ರೇಣವ್ವ.ಸಂತಪ್ಪ.ಭಾವಿಮನಿ | ಬೆಳಗಲಿಯಿಂದ ನಂದಗಾಂವ ರಸ್ತೆ ನಡುತೋಪು **(1501006004/OP/093020608)** | 1 | 74 |

## ಆಕರ ಗ್ರಂಥಗಳು

1. Deb, K,. Rural Development in India Since Independence (streling New Delhi ), 1986.
2. Dutt, S. and Sundaram, KPM : Indian Economy (S. Chand, New Delhi), 1992.
3. Harris, John (Ed) : Rural Development : Theories of Peasant Economy and Agrarian Changes (ELBS, London), 1986.
4. Maheshwari, S.R. : Rural Development in India (Sage Publishers, New Delhi) 1995.
5. Singh Katar : Rural Development - priniciples, policies and Management (Sage, New Delhi) 1986.
6. Mishra,S.K. and Puri, V.K. : Indian Economy (Himalaya Publishing House, New Delhi), 1997.
7. ನಾಗೇಶ ಎಚ್.ವ್ಹಿ. : ಗ್ರಾಮಾಂತರ (ಭಾರತ ಬುಕ್ ಡಿಪೋ, ಧಾರವಾಡ),1992.

**ನಿಯತಕಾಲಿಕೆ**

ಯೋಜನಾ : ಸಂ. ಎಸ್. ಬಿ. ಶರಣ್, ವಿಶೇಷ ಸಂಚಿಕೆ, ಆಗಸ್ಟ ೨೦೦೮

